KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜುಲೈ ೯, ೨೦೦೯ (ಆಷಾಢ ೧೮, ಶಕ ವರ್ಷ ೧೯೩೧) | ಸಂಚಿಕೆ ೨೮ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಪೊಲೀಸ್ ಅಧೀಕ್ಷಕರ ಕಚೇರಿ, ಉತ್ತರಕನ್ನಡ, ಕಾರವಾರ**

**ಟೆಂಡರ್ ಕಮ್ ಬಹಿರಂಗ ಹರಾಜು**

**ಸಂಖ್ಯೆ: ಎಸಿಟಿ–5/ಎಂ.ಟಿ–109/2008–09**

**ವಿಷಯ:** ಉತ್ತರಕನ್ನಡ ಜಿಲ್ಲೆಯ ವಾಹನ ವಿಭಾಗದಲ್ಲಿ ನಿರುಪಯುಕ್ತ ವಾಹನಗಳನ್ನು ಟೆಂಡರ್ ಕಮ್ ಬಹಿರಂಗ ಹರಾಜು ಮೂಲಕ ದಿ: 19/08/2009 ರಂದು ಸಾರ್ವಜನಿಕರಿಗೆ ಮಾರಾಟ ಮಾಡುವ ಕುರಿತು.

**ಉಲ್ಲೇಖ:** 1. ಸರ್ಕಾರದ ಆದೇಶ ಸಂಖ್ಯೆ: ಹೆಚ್.ಡಿ: 19:ಇಎಂವಿ:2009, ಬೆಂಗಳೂರು ದಿನಾಂಕ: 12/05/2009.
2. ಪ್ರಧಾನ ಕಛೇರಿ ಪತ್ರ ಸಂಖ್ಯೆ: ವಾಸಾ(1) 18/2009–10, ದಿ: 23/05/2009.

ಸಾರ್ವಜನಿಕರಿಗೆ ಈ ಮೂಲಕ ತಿಳಿಸುವುದೇನೆಂದರೆ, ಉಲ್ಲೇಖ 1 ಮತ್ತು 2 ರ ಆದೇಶದಲ್ಲಿ ನಿರುಪಯುಕ್ತ ಗೊಳಿಸಲಾಗಿರುವ ಉತ್ತರಕನ್ನಡ ಜಿಲ್ಲಾ ಪೊಲೀಸ್ ಇಲಾಖೆಗೆ ಸೇರಿದ ಈ ಕೆಳಕಂಡ ಪೊಲೀಸ್ ವಾಹನಗಳನ್ನು ದಿ: 19.08.2009 ರಂದು ಬೆಳಿಗ್ಗೆ 10.00 ಗಂಟೆಗೆ ಉತ್ತರ ಕನ್ನಡ ಜಿಲ್ಲೆ ಸಶಸ್ತ್ರ ಮೀಸಲುಪಡೆ ಕಛೇರಿ, ಕಾಜುಭಾಗ ಆವರಣದಲ್ಲಿ ಇರುವ ಸ್ಥಿತಿಯಲ್ಲಿಯೇ ಟೆಂಡರ್ ಕಮ್ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಈ ವಾಹನಗಳನ್ನು ಖರೀದಿಸಬಹುದಾಗಿದೆ. ಟೆಂಡರ್‌ಗಳನ್ನು ನಿಗದಿತ ಠೇವಣಿಯೊಂದಿಗೆ ದಿನಾಂಕ: 18/08/2009 ಸಂಜೆ 4–00 ಗಂಟೆಯೊಳಗೆ ಈ ಕಚೇರಿಗೆ ತಲುಪುವಂತೆ ಕಳುಹಿಸಬೇಕು. ನಂತರ ಬಂದವುಗಳನ್ನು ಮಾನ್ಯ ಮಾಡಲಾಗುವುದಿಲ್ಲ.

| ಕ್ರ. ಸಂ. | ವಾಹನಗಳ ಹೆಸರು ಮತ್ತು ನೊಂದಣಿ ಸಂಖ್ಯೆ | ಖರೀದಿಸಿದ ವರ್ಷ |
|---|---|---|
| 1 | ಮಹೇಂದ್ರ ಜೀಪು<br>ಕೆಎ.30–ಜಿ–6 | 1990 |
| 2 | ಮಹೇಂದ್ರ ಟೆಂಪೊ<br>ಕೆಎ–30–ಜಿ–9 | 1990 |
| 3 | ಎನ್ ಫೀಲ್ಡ್ ಮೋಟಾರ್ ಸೈಕಲ್<br>ಸಿಎಜಿ–9658 | 1986 |
| 4 | ರಾಯಲ್ ಎನ್‌ಫೀಲ್ಡ್<br>ಮೋಟಾರ್ ಸೈಕಲ್ ಸಿಎಜಿ–9665 | 1987 |
| 5 | ಅಂಬಾಸಿಡರ್ ಕಾರು<br>ಕೆಎ–30–ಜಿ–36 | 1992 |
| 6 | ಮಹೇಂದ್ರ ಜೀಪು<br>ಸಿಎಜಿ–1964 | 1987 |

ಹೆಚ್ಚಿನ ವಿವರಗಳನ್ನು ಜಿಲ್ಲೆಯ ಯಾವುದೇ ಪೊಲೀಸ್ ಠಾಣೆಯ ಅಥವಾ ಈ ಕಚೇರಿಯ ನೋಟಿಸ್ ಬೋರ್ಡಿನಲ್ಲಿರುವ ವಿವರವಾದ ಪ್ರಕಟಣೆಯಿಂದ ತಿಳಿದುಕೊಳ್ಳುವುದು.

ಪಿ.ಆರ್. 457 ಪೊಲೀಸ್ ಅಧೀಕ್ಷಕರು, ಉತ್ತರಕನ್ನಡ, ಕಾರವಾರ.

**ಜಿಲ್ಲಾ ಪೊಲೀಸ್ ಕಾರ್ಯಾಲಯ, ಗದಗ ಜಿಲ್ಲೆ, ಗದಗ**

**ಬಹಿರಂಗ ಹರಾಜು ಪ್ರಕಟಣೆ**

**ಸಂ: ಎಂ.ಟಿ./520/2009, ದಿನಾಂಕ: 6ನೇ ಜೂನ್ 2009**

**ವಿಷಯ:** ಗದಗ ಜಿಲ್ಲೆಯ ಸಶಸ್ತ್ರ ಮೀಸಲು ಪಡೆಯ ವಾಹನ ಸಾರಿಗೆ ವಿಭಾಗದಲ್ಲಿರುವ 06 ವಿವಿಧ ಮಾದರಿಯ ನಿರುಪಯುಕ್ತ ವಾಹನಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಆದೇಶ ಸಂ:ಸಿಆಸುಇ/142/ಶಿವಾನಿ/2000, ದಿ:5.01.2001.

2. ಸರ್ಕಾರದ ಪತ್ರ ಸಂ.ಹೆಚ್‌ಡಿ/19/ಇಎಂವಿ/2009, ದಿ:12.5.09.

3. ಪ್ರಧಾನ ಕಛೇರಿ ಆದೇಶ ಸಂ.ವಾಸಾ(1)/18/08–09, ದಿನಾಂಕ:23.5.2009.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ನಮೂದಿಸಿರುವ ವಿವಿಧ ಮಾದರಿಯ ಒಟ್ಟು 06 ನಿರುಪಯುಕ್ತ ಹಳೆಯ ಪೊಲೀಸ್ ವಾಹನಗಳನ್ನು ಗದಗ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ವಾಹನ ಸಾರಿಗೆ ವಿಭಾಗದ ಆವರಣದಲ್ಲಿ **ದಿನಾಂಕ: 23.07.2009 ರಂದು ಬೆಳಿಗ್ಗೆ 11.00** ಗಂಟೆಗೆ ಬಹಿರಂಗ ಹರಾಜು ಮಾಡಲಾಗುವುದು.

**ವಾಹನಗಳ ವಿವರ**

| ಅ. ಸಂ. | ವಾಹನದ ನೋಂದಣಿ ಸಂಖ್ಯೆ | ಮಾದರಿ | ತಯಾರಿಕೆ ವರ್ಷ |
|---|---|---|---|
| 1 | ಕೆಎ–01/ಜಿ–834 | ಅಂಬಾಸಿಡರ್ ಕಾರ್ | 1992 |
| 2 | ಕೆಎ–25/ ಜಿ–78 | ಮಹೀಂದ್ರಾ ಜೀಪ್ | 1993 |
| 3 | ಕೆಎ–25/ ಜಿ–1018 | ಬುಲೆಟ್ ಎನ್ ಫೀಲ್ಡ್ ಮೋ/ಸೈ | 1990 |
| 4 | ಕೆಎ–25/ ಜಿ–1020 | ಬುಲೆಟ್ ಎನ್ ಫೀಲ್ಡ್ ಮೋ/ಸೈ | 1990 |
| 5 | ಕೆಎ–25/ ಜಿ–1021 | ಬುಲೆಟ್ ಎನ್ ಫೀಲ್ಡ್ ಮೋ/ಸೈ | 1990 |
| 6 | ಕೆಎ–25/ ಜಿ–1059 | ಬುಲೆಟ್ ಎನ್ ಫೀಲ್ಡ್ ಮೋ/ಸೈ | 1993 |

ಮೇಲೆ ನಮೂದಿಸಿರುವ ನಿರುಪಯುಕ್ತ ವಾಹನಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಬಹಿರಂಗ ಹರಾಜು ಮಾಡಲಾಗುವುದು.

**ಹರಾಜಿನ ನಿಬಂಧನೆಗಳು:**

1) ಬಹಿರಂಗ ಹರಾಜಿನ ಮೂಲಕ ನಿರುಪಯುಕ್ತ ವಾಹನಗಳನ್ನು ವಿಲೇವಾರಿ ಮಾಡುವುದಿದ್ದು ಅತಿ ಹೆಚ್ಚಿನ ಬೆಲೆಗೆ ಬೇಡಿಕೆ ಬಂದರೆ ಮಾತ್ರ ವಾಹನವನ್ನು ಬಿಡ್‌ದಾರರಿಗೆ ನೀಡಲಾಗುವುದು.
2) ನಿರುಪಯುಕ್ತ ವಾಹನಗಳು ಯಾವ ಸ್ಥಿತಿಯಲ್ಲಿವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.
3) ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸುವ ಮುನ್ನ ರೂ.5,000/– (ರೂ. ಐದು ಸಾವಿರ ಮಾತ್ರ) ಗಳ ಠೇವಣಿಯನ್ನು ಕಛೇರಿಯಲ್ಲಿ ಪಾವತಿಸತಕ್ಕದ್ದು. ಹರಾಜು ಪ್ರಾರಂಭವಾದ ನಂತರ ಸವಾಲುದಾರರಿಂದ ಠೇವಣಿ ಹಣವನ್ನು ಪಡೆಯಲಾಗುವುದಿಲ್ಲ. ಹಾಗೂ ಠೇವಣಿ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡುವುದಿಲ್ಲ.
4) ಆಸಕ್ತ ಬಿಡ್‌ದಾರರು ಕಛೇರಿ ವೇಳೆಯಲ್ಲಿ ನಿರುಪಯುಕ್ತ ವಾಹನಗಳನ್ನು ಡಿ.ಎ.ಆರ್. ಹೆಡ್ ಕ್ವಾರ್ಟರ್ಸ್ ಗದಗದಲ್ಲಿ ಪರಿಶೀಲಿಸಬಹುದು.
5) ಪೊಲೀಸ್ ಅಧೀಕ್ಷಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜು ನಡೆಸುವರು.
6) ಠೇವಣಿಯನ್ನು ತುಂಬಿದ ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ. ಠೇವಣಿ ಹಣವನ್ನು ನಗದು ರೂಪದಲ್ಲಿ ಮಾತ್ರ ಸ್ವೀಕರಿಸಲಾಗುತ್ತದೆ.
7) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬಿಡ್ ದರವನ್ನು ದಾಖಲಿಸಿಕೊಳ್ಳಲಾಗುತ್ತದೆ.
8) ಯಾರು ಅತೀ ಹೆಚ್ಚಿನ ದರವನ್ನು ಸೂಚಿಸುವರೋ ಅವರನ್ನು ಯಶಸ್ವಿ ಸವಾಲುದಾರರೆಂದು ಪರಿಗಣಿಸಲಾಗುವುದು.
9) ನಿರುಪಯುಕ್ತ ವಾಹನಗಳ ಮೇಲೆ ನಿಯಮ ಪ್ರಕಾರ ಚಾಲ್ತಿಯಲ್ಲಿರುವ ಮಾರಾಟ ತೆರಿಗೆಯನ್ನು ವಿಧಿಸಲಾಗುವುದು.
10) ಹರಾಜು ಮುಗಿದ ತಕ್ಷಣವೇ ಯಶಸ್ವಿಯಾಗದ ಬಿಡ್‌ದಾರರ ಠೇವಣಿಯನ್ನು ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.
11) ಹರಾಜು ಮಾಡುವ ವೇಳೆಯಲ್ಲಿ ಯಾವುದೇ ವಾದ ವಿವಾದ ಉದ್ಭವಿಸಿದಲ್ಲಿ ಪೊಲೀಸ್ ಸೂಪರಿಂಟೆಂಡೆಂಟ್, ಗದಗ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
12) ಯಶಸ್ವಿಯಾದ ಸವಾಲುದಾರರು ಬಿಡ್ ದರದ ಶೇಕಡಾ 25 ರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ ಬೆಂಗಳೂರು

ರವರು ಹರಾಜಿನಲ್ಲಿ ಅತೀ ಹೆಚ್ಚಿನ ಬಿಡ್‌ದಾರರ ಬಿಡ್ಡನ್ನು ಅನುಮೋದಿಸಿದ ನಂತರ ಬಾಕಿ ಹಣವನ್ನು ಮತ್ತು ಪ್ರಸ್ತುತ ತೆರಿಗೆಯನ್ನು ಸಂಪೂರ್ಣವಾಗಿ ಪಾವತಿ ಮಾಡಿದ ನಂತರ ಹರಾಜು ಮಾಡಲಾದ ನಿರುಪಯುಕ್ತ ವಾಹನವನ್ನು ಏಳು (7) ದಿವಸಗಳೊಳಗಾಗಿ ತಮ್ಮ ಸ್ವಂತ ವೆಚ್ಚದಿಂದ ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಅವರು ತುಂಬಿದ ಶೇಕಡಾ 25 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

13) ಹರಾಜಿನ ದಿನಾಂಕವನ್ನು ಬದಲಾಯಿಸುವ, ಹರಾಜಿನಲ್ಲಿ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಸೂಪರಿಂಟೆಂಡೆಂಟ್‌ರು, ಗದಗ ರವರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮವಾದದ್ದು.

ಪಿ.ಆರ್. 461 ಪೊಲೀಸ್ ಸೂಪರಿಂಟೆಂಡೆಂಟರು, ಗದಗ ಜಿಲ್ಲೆ, ಗದಗ.

**ಪೊಲೀಸ್ ಮಹಾ ನಿರ್ದೇಶಕರವರ ಕಾರ್ಯಾಲಯ,**
**ಸಿ.ಓ.ಡಿ. ತರಬೇತಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಕಾರ್ಲ್‌ಟನ್, ಭವನ, ಅರಮನೆ ರಸ್ತೆ,**
**ಬೆಂಗಳೂರು – 560 001.**

**ಅಧಿಸೂಚನೆ**

**ಸಂಖ್ಯೆ:113:ವಾಸಾ:ಸಿಓಡಿ:2004–05, ದಿನಾಂಕ: 17ನೇ ಜೂನ್ 2009**

**ವಿಷಯ:** ಸಿ.ಓ.ಡಿ. ಘಟಕಕ್ಕೆ ಸೇರಿದ 37 ನಿರುಪಯುಕ್ತ ಪೊಲೀಸ್ ವಾಹನಗಳನ್ನು ಟೆಂಡರ್/ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ/19/ಇಎಮ್‌ವಿ:2009, ದಿನಾಂಕ: 12.05.2009.
2. ಆದೇಶ ಸಂಖ್ಯೆ: ಸಿಆಸುಇ/142/ಶಿವಾನೀ/2000, ದಿನಾಂಕ: 05.01.2001
3. ಪೊಲೀಸ್ ಮಹಾನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು ಕರ್ನಾಟಕ ರಾಜ್ಯ, ಬೆಂಗಳೂರು ರವರ ಪತ್ರದ ಸಂಖ್ಯೆ: ವಾಸಾ(1)/18/2008–09, ದಿನಾಂಕ: 23.05.2009.

ಸಾರ್ವಜನಿಕರ ಮಾಹಿತಿಗಾಗಿ ಈ ಮೂಲಕ ತಿಳಿಸುವುದೇನೆಂದರೆ, ಸಿಓಡಿ ಘಟಕದ ಕಛೇರಿಯ ಆವರಣದಲ್ಲಿ ಯಥಾಸ್ಥಿತಿಯಲ್ಲಿರುವ ಮೆಟಾಡೋರ್ ಟೆಂಪೋ–01, ಅಂಬಾಸಡರ್ ಕಾರು–02, ಮಹೇಂದ್ರ ಜೀಪು–12, ಬುಲ್ಲೆಟ್ ಮೋಟಾರು ಸೈಕಲ್–22, ಒಟ್ಟು 37 ನಿರುಪಯುಕ್ತ ಪೊಲೀಸ್ ವಾಹನಗಳನ್ನು ಟೆಂಡರ್/ಬಹಿರಂಗ ಹರಾಜು ಮೂಲಕ ಡೈರೆಕ್ಟರ್ ಜನರಲ್ ಆಫ್ ಪೊಲೀಸ್., ಸಿ.ಓ.ಡಿ. ತರಬೇತಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಕಾರ್ಲ್‌ಟನ್ ಭವನ, ಅರಮನೆ ರಸ್ತೆ, ಬೆಂಗಳೂರು–560 001 ಕಛೇರಿಯ ಆವರಣದಲ್ಲಿ ಸರ್ಕಾರಿ ಆದೇಶದಂತೆ ಹಾಗೂ ಪೊಲೀಸ್ ಪ್ರಧಾನ ಕಛೇರಿಯ ಪತ್ರದಂತೆ ದಿನಾಂಕ:27.07.2009 ರಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಹರಾಜು (ಮಾರಾಟ) ಮಾಡಲಾಗುವುದು.

ಹರಾಜು ಮಾಡಲಿರುವ 37 ವಾಹನಗಳ ಮಾಹಿತಿಯನ್ನು ಸಿಓಡಿ ಘಟಕದ ವಾಹನ ಸಾರಿಗೆ ವಿಭಾಗದಲ್ಲಿ ಪಡೆಯಬಹುದು.

**ಟೆಂಡರ್–ಕಂ–ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1. ಮೊಹರು ಮಾಡಿದ (ಸೀಲ್ಡ್ ಟೆಂಡರ್) ಲಕೋಟೆಯನ್ನು ಡೈರೆಕ್ಟರ್ ಜನರಲ್ ಆಫ್ ಪೊಲೀಸ್., ಸಿ.ಓ.ಡಿ. ತರಬೇತಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಕಾರ್ಲ್‌ಟನ್ ಭವನ, ಅರಮನೆ ರಸ್ತೆ, ಬೆಂಗಳೂರು–560001. ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ "ನಿರುಪಯುಕ್ತ ಪೊಲೀಸ್ ವಾಹನಗಳನ್ನು ಖರೀದಿಸುವ ಬಗ್ಗೆ" ಎಂಬುದನ್ನು ಬಿಡಿ ಅಕ್ಷರಗಳಲ್ಲಿ ನಮೂದಿಸಬೇಕು.
2. ಪ್ರತಿಯೊಬ್ಬ ಟೆಂಡರ್‌ದಾರರು ಫಾರಂನಲ್ಲಿ ಅತೀ ಹೆಚ್ಚಿನ ದರವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲಿಯೂ ಬರೆದಿರಬೇಕು. ಟೆಂಡರ್ ಫಾರಂನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಮಾಡಿದ್ದರೆ ಆ ಸ್ಥಳದಲ್ಲಿ ಟೆಂಡರ್‌ದಾರರು ಪೂರ್ಣ ಸಹಿ ಮಾಡತಕ್ಕದ್ದು. ಪ್ರತಿಯೊಂದು ವಾಹನಕ್ಕೂ ಪ್ರತ್ಯೇಕವಾಗಿ ಟೆಂಡರ್ ಫಾರಂ ಅನ್ನು ಸಲ್ಲಿಸಬೇಕು. ಸಲ್ಲಿಸುವಾಗ ಪ್ರತಿ ನಾಲ್ಕು ಚಕ್ರದ ವಾಹನಕ್ಕೆ ರೂ.2,000/– (ಎರಡು ಸಾವಿರ ರೂಗಳು ಮಾತ್ರ) ಪ್ರತಿಯೊಂದು ದ್ವಿಚಕ್ರ ವಾಹನಕ್ಕೆ ರೂ.1,000/– (ಒಂದು ಸಾವಿರ ರೂಗಳು ಮಾತ್ರ) ಗಳನ್ನು ನಗದು ರೂಪದಲ್ಲಿ ಮುಂಗಡವಾಗಿ ನಗದು ಶಾಖೆಗೆ ಠೇವಣಿ ಸಲ್ಲಿಸತಕ್ಕದ್ದು.
3. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
4. ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ: 25.07.2009 ರ ಸಂಜೆ 4.00 ಗಂಟೆಯವರೆಗೆ ಡೈರೆಕ್ಟರ್ ಜನರಲ್ ಆಫ್ ಪೊಲೀಸ್., ಸಿಓಡಿ ಬೆಂಗಳೂರು ರವರ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.

5. ಟೆಂಡರ್‌ದಾರರೂ ಸಹ ಬಹಿರಂಗ ಹರಾಜಿನಲ್ಲಿ ಹೆಚ್ಚಿನ ಠೇವಣಿ ಹಣವಿಲ್ಲದೆ ಭಾಗವಹಿಸಬಹುದು. ಸವಾಲು ಮೂಲಕ ವಾಹನಗಳನ್ನು ಹರಾಜು ಮಾಡಲಾಗುವುದು.
6. ಪ್ರತಿಯೊಬ್ಬ ಸವಾಲುದಾರರು ದ್ವಿಚಕ್ರ ವಾಹನಕ್ಕೆ ರೂ. 1000–00 (ಒಂದು ಸಾವಿರ ರೂಗಳು ಮಾತ್ರ) ಮತ್ತು ನಾಲ್ಕು ಚಕ್ರದ ವಾಹನಕ್ಕೆ ರೂ. 2000/– (ಎರಡು ಸಾವಿರ ರೂಗಳು ಮಾತ್ರ) ಠೇವಣಿ ಹಣವನ್ನು ನಗದು ಮೂಲಕ ಡೈರೆಕ್ಟರ್ ಜನರಲ್ ಆಫ್ ಪೊಲೀಸ್., ಸಿಓಡಿ ಬೆಂಗಳೂರು ರವರ ಕಛೇರಿಯಲ್ಲಿ ಅರ್ಜಿಯ ಜೊತೆ ಸಲ್ಲಿಸತಕ್ಕದ್ದು. ಠೇವಣಿ ಹಣಕ್ಕೆ ಬಡ್ಡಿಯನ್ನು ಕೊಡಲಾಗುವುದಿಲ್ಲ. ಠೇವಣಿ ಹಣವಿಲ್ಲದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಠೇವಣಿ ಇಲ್ಲದೆ ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಲಾಗುವುದು.
7. ಸವಾಲುದಾರರು (ಟೆಂಡರ್‌ದಾರರನ್ನು ಹೊರತು ಪಡಿಸಿ) ಠೇವಣಿ ರೂಪದಲ್ಲಿ ದ್ವಿಚಕ್ರ ವಾಹನಕ್ಕೆ ರೂ.1000–00 (ಒಂದು ಸಾವಿರ ರೂಗಳು ಮಾತ್ರ) ಮತ್ತು ನಾಲ್ಕು ಚಕ್ರದ ವಾಹನಕ್ಕೆ ರೂ.2000/– (ಎರಡು ಸಾವಿರ ರೂಗಳು ಮಾತ್ರ) ಅನ್ನು ಸ್ಥಳದಲ್ಲಿ ಪಾವತಿ ಮಾಡಿ ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುತ್ತದೆ.
8. ಡೈರೆಕ್ಟರ್ ಜನರಲ್ ಆಫ್ ಪೊಲೀಸ್., ಸಿ.ಓ.ಡಿ. ಬೆಂಗಳೂರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು. ಠೇವಣಿಯನ್ನು ತುಂಬಿದ ಟೆಂಡರ್‌ದಾರರು ಅಥವಾ ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
9. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬಿಡ್‌ದಾರರನ್ನು ದಾಖಲಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್‌ಗಳನ್ನು ಡೈರೆಕ್ಟರ್ ಜನರಲ್ ಆಫ್ ಪೊಲೀಸ್., ಸಿ.ಓ.ಡಿ. ಬೆಂಗಳೂರು ರವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಸಾರ್ವಜನಿಕರ ಸಮಕ್ಷಮ ತೆರೆದು ಬಹಿರಂಗಪಡಿಸುವರು. ಟೆಂಡರ್ ಅಥವಾ ಸವಾಲುದಾರರಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸಿರುವರೊ ಅವರನ್ನು ಯಶಸ್ವಿ ಟೆಂಡರ್/ಸವಾಲುದಾರರೆಂದು ಪರಿಗಣಿಸಲಾಗುವುದು. ಮೊದಲಿಗೆ ಬಹಿರಂಗ ಹರಾಜು ನಡೆಸಲಾಗುವುದು. ನಂತರ ಟೆಂಡರ್‌ಗಳನ್ನು ಪರಿಗಣಿಸಲಾಗುವುದು.
10. ಯಶಸ್ವಿಯಾದ ಟೆಂಡರ್‌ದಾರರು/ ಸವಾಲುದಾರರು ವಾಹನಗಳ ಒಟ್ಟು ಬೆಲೆಯ 25% ರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು. ಉಳಿದ ಹಣವನ್ನು ಡೈರೆಕ್ಟರ್ ಜನರಲ್ ಆಫ್ ಪೊಲೀಸ್ ಸಿ.ಓ.ಡಿ. ಬೆಂಗಳೂರು ರವರು ಸದರಿ ಹರಾಜನ್ನು ಅಂಗೀಕರಿಸಿದ ನಂತರ ಸಂಪೂರ್ಣ ಹಣ ಪಾವತಿ ಮಾಡಿ ತಮ್ಮ ಸ್ವಂತ ಖರ್ಚಿನಿಂದ 10 ದಿನಗಳೊಳಗಾಗಿ ನಿರುಪಯುಕ್ತ ಪೊಲೀಸ್ ವಾಹನಗಳನ್ನು ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಈಗಾಗಲೇ ಅವರು ತುಂಬಿದ 25% ರಷ್ಟು ಹಣವನ್ನು ಹಾಗೂ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆ ಹೊರಡಿಸಿ ಹರಾಜು ಮಾಡಲಾಗುವುದು.
11. ಎಲ್ಲಾ ಹಣವನ್ನು ಡೈರೆಕ್ಟರ್ ಜನರಲ್ ಆಫ್ ಪೊಲೀಸ್., ಸಿ.ಓ.ಡಿ. ಬೆಂಗಳೂರು ರವರ ಕಛೇರಿಯಲ್ಲಿ ನಗದು ರೂಪದಲ್ಲಿ ತುಂಬಬೇಕು. ಚೆಕ್ಕುಗಳನ್ನು, ಡಿ.ಡಿ. ಗಳನ್ನು ಸ್ವೀಕರಿಸಲಾಗುವುದಿಲ್ಲ.
12. ಮಾರಾಟ ತೆರಿಗೆಯನ್ನು ಹಾಗೂ ಇತರ ತೆರಿಗೆಗಳನ್ನು ಚಲಾವಣೆಯಲ್ಲಿರುವ ದರದ ನಿಯಮಗಳ ಆಧಾರದ ಮೇರೆಗೆ ಸವಾಲಿನ ಹಣದ ಜೊತೆಗೆ ವಸೂಲಿ ಮಾಡಲಾಗುವುದು.
13. ಮಾರಾಟ ತೆರಿಗೆಯನ್ನು ಹಾಗೂ ಇತರ ತೆರಿಗೆಗಳನ್ನು ಚಲಾವಣೆಯಲ್ಲಿರುವ ದರದ ನಿಯಮಗಳ ಆಧಾರದ ಮೇರೆಗೆ ಸವಾಲಿನ ಹಣದ ಜೊತೆಗೆ ವಸೂಲಿ ಮಾಡಲಾಗುವುದು.
14. ಹರಾಜು ಮಾಡುವ ವೇಳೆಯಲ್ಲಿ ಏನಾದರೂ ತಕರಾರು ಬಂದಲ್ಲಿ ಡೈರೆಕ್ಟರ್ ಜನರಲ್ ಆಫ್ ಪೊಲೀಸ್., ಸಿ.ಓ.ಡಿ. ಬೆಂಗಳೂರು ರವರು ಕೈಗೊಳ್ಳುವ ನಿರ್ಣಯವೇ ಅಂತಿಮವಾಗಿರುತ್ತದೆ.
15. ಹರಾಜಿನಲ್ಲಿ ಯಾವುದೇ ಸವಾಲನ್ನು/ಟೆಂಡರ್‌ಗಳನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ಮುಂದೂಡುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಡೈರೆಕ್ಟರ್ ಜನರಲ್ ಆಫ್ ಪೊಲೀಸ್., ಸಿ.ಓ.ಡಿ. ಬೆಂಗಳೂರು ರವರು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮವಾದುದು.
16. ಇಚ್ಚೆಯುಳ್ಳ ಟೆಂಡರ್‌ದಾರರು ಮತ್ತು ಸವಾಲುದಾರರು ಹರಾಜು ಮಾಡಲಿಕ್ಕಿರುವ ನಿರುಪಯುಕ್ತ ಪೊಲೀಸ್ ವಾಹನಗಳನ್ನು ಹೇಗಿದೆಯೋ ಹಾಗೆ ಡೈರೆಕ್ಟರ್ ಜನರಲ್ ಆಫ್ ಪೊಲೀಸ್., ಸಿ.ಓ.ಡಿ ಬೆಂಗಳೂರು ರವರ ಕಛೇರಿಯ ವೇಳೆಯಲ್ಲಿ ನೋಡಬಹುದು.
17. ಟೆಂಡರ್‌ದಾರರು ಪ್ರತಿ ನಿರುಪಯುಕ್ತ ಪೊಲೀಸ್ ವಾಹನಕ್ಕೆ ಅತೀ ಹೆಚ್ಚಿನ ಬೆಲೆಯನ್ನು ಲಗತ್ತಿಸಿರುವ ಟೆಂಡರ್ ನಮೂನೆಯಲ್ಲಿ ತೋರಿಸಬೇಕು. ಬೆಲೆಗಳನ್ನು ಅಕ್ಷರ ಮತ್ತು ಅಂಕಿಗಳಲ್ಲಿ ನಮೂದಿಸಬೇಕು.

ಪೊಲೀಸ್ ಮಹಾ ನಿರ್ದೇಶಕರು

ಪಿ.ಆರ್. 474

ಸಿ.ಓ.ಡಿ. ತರಬೇತಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು,

ಬೆಂಗಳೂರು ರವರ ಪರವಾಗಿ

## ಸಹಕಾರ ಇಲಾಖೆ

**ರಾಜ್ಯ ಟೆಂಡರ್ ಬುಲೆಟಿನ್ ಅಧಿಕಾರಿ ಕಛೇರಿ, ಕೊಠಡಿ ಸಂಖ್ಯೆ: 621, 6ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು**

**ಸಂಕ್ಷಿಪ್ತ ಇ–ಟೆಂಡರ್ ಪ್ರಕಟಣೆ**

**ಸಂಖ್ಯೆ: ಸಇ 88 ಎಂಆರ್‌ಇ 2009, ದಿನಾಂಕ: 8ನೇ ಜೂನ್ 2009**

ಯಶವಂತಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬೆಂಗಳೂರು ಇದರ ವತಿಯಿಂದ ಈ ಕೆಳಕಂಡ ಅಭಿವೃದ್ಧಿ ಕಾಮಗಾರಿಗಳಿಗೆ ಐಟಂವಾರು ಟೆಂಡರುಗಳನ್ನು ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಪ್ರಥಮ ದರ್ಜೆ ಗುತ್ತಿಗೆದಾರರಿಂದ ಇಲೆಕ್ಟ್ರಾನಿಕ್ ಟೆಂಡರ್ ಪದ್ಧತಿಯಲ್ಲಿ ಹಾಗೂ 2 ಲಕೋಟೆ ಪದ್ಧತಿಯಲ್ಲಿ ದ್ವಿಪ್ರತಿಗಳಲ್ಲಿ ಸಲ್ಲಿಸಲು ಆಹ್ವಾನಿಸಲಾಗಿದೆ.

| ಕ್ರ. ಸಂ. | ಕಾಮಗಾರಿಯ ವಿವರ | ಟೆಂಡರ್ ಮೊಬಲಗು (ಅಂದಾಜು) (ರೂ.ಲಕ್ಷಗಳಲ್ಲಿ) | ಇ.ಎಂ.ಡಿ. ಮೊಬಲಗು (ರೂ.ಲಕ್ಷಗಳಲ್ಲಿ) | ಟೆಂಡರ್ ಫಾರಂ ಶುಲ್ಕ (ರೂ.ಗಳಲ್ಲಿ) (ಹಿಂತಿರುಗಿಸಲಾಗದ ಮೊತ್ತ) | ಕೆಲಸ ಪೂರೈಸಲು ನಿಗದಿಪಡಿಸಿದ ಅವಧಿ (ಮಳೆಗಾಲ ಹೊರತುಪಡಿಸಿ) | ಅರ್ಹ ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಯಶವಂತಪುರ ಪ್ರಾಂಗಣದ ಒಳಾಂಗಣ ರಸ್ತೆಗಳಿಗೆ ಮರುಡಾಂಬರೀಕರಣ ಮಾಡುವ ಕಾಮಗಾರಿ. | 131.85 | 1.98 | 25,000.00 + 12.5% ತೆರಿಗೆ | 6 ತಿಂಗಳು | 1ನೇ ದರ್ಜೆ |
| 2. | ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಯಶವಂತಪುರ ಸಮಿತಿಯ ವಶಕ್ಕೆ ಸೇರಿದ ಮಾಗಡಿ ರಸ್ತೆಯಲ್ಲಿರುವ ಹೇರೋಹಳ್ಳಿ ಗ್ರಾಮದ ಸರ್ವೆ ನಂ:52/2 ಕ್ಕೆ ಕಲ್ಲು ಕಟ್ಟಡದ ಕಾಂಪೌಂಡ್ ಗೋಡೆ ನಿರ್ಮಾಣ ಮಾಡುವ ಕುರಿತು. | 219.00 | 3.285 | 30,000.00 + 12.5% ತೆರಿಗೆ | 6 ತಿಂಗಳು | 1ನೇ ದರ್ಜೆ |

1. ಪ್ರೀ ಬಿಡ್ ಮೀಟಿಂಗ್ ವಿವರಗಳು : 15/07/2009 ಸಂಜೆ 4.30 ಗಂಟೆವರೆಗೆ
2. ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ : 18/07/2009 ಸಂಜೆ 3.30 ಗಂಟೆವರೆಗೆ
3. ಭರ್ತಿಮಾಡಿದ ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ : 20/07/2009 ಸಂಜೆ 3.30 ಗಂಟೆ
4. ತಾಂತ್ರಿಕ ಬಿಡ್ ತೆರೆಯುವ ದಿನಾಂಕ : 20/07/2009 ಸಂಜೆ 4.30 ಗಂಟೆಗೆ
5. ಆರ್ಥಿಕ ಬಿಡ್ ತೆರೆಯುವ ದಿನಾಂಕ : 22/07/2009 ಸಂಜೆ 4.30 ಗಂಟೆಗೆ

- ★ ಎ.ಪಿ.ಎಂ.ಸಿ. ಟೆಂಡರ್ ಫಾರಂ ಫೀ ಮೊತ್ತವನ್ನು ನಗದು ಅಥವಾ ಡಿ.ಡಿ. ಮೂಲಕ ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಯಶವಂತಪುರ, ಬೆಂಗಳೂರು ಇವರ ಹೆಸರಿನಲ್ಲಿ ಪಡೆದು ಅರ್ಜಿ ಜೊತೆಯಲ್ಲಿ ಸಲ್ಲಿಸುವುದು ಹಾಗೂ ಪ್ರತಿಯನ್ನು ಅಪ್‌ಲೋಡ್ ಮಾಡುವುದು.
- ★ ಇ–ಟೆಂಡರ್ ಪ್ರೋಸೆಸಿಂಗ್ ಫೀ ಮತ್ತು ಇ.ಎಂ.ಡಿ.ಯನ್ನು ಪ್ರತ್ಯೇಕವಾಗಿ ಟೆಂಡರ್ ಡಾಕ್ಯೂಮೆಂಟಿನಲ್ಲಿ ತಿಳಿಸಿರುವ ಯಾವುದಾದರೂ ಒಂದು ಮಾದರಿಯಲ್ಲಿ ಸಂದಾಯ ಮಾಡುವುದು ಮತ್ತು ಪ್ರತಿಗಳನ್ನು ದಾಖಲೆಗಳೊಂದಿಗೆ ಅಪ್‌ಲೋಡ್ ಮಾಡುವುದು.
- ★ ಟೆಕ್ನಿಕಲ್ ಬಿಡ್‌ನಲ್ಲಿ ಅರ್ಹತೆ ಹೊಂದುವ ಕುರಿತು ಎಲ್ಲಾ ಷರತ್ತುಗಳನ್ನು ವೆಬ್‌ಸೈಟ್‌ನಲ್ಲಿ ಪಡೆಯತಕ್ಕದ್ದು ಮತ್ತು ಟೆಕ್ನಿಕಲ್ ಬಿಡ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರ ಆರ್ಥಿಕ ಬಿಡ್ಡನ್ನು ಮಾತ್ರ ಪರಿಗಣಿಸಲಾಗುವುದು.
- ★ ಮೇಲ್ಕಂಡ ದಿನಾಂಕಗಳಲ್ಲಿ ಸರ್ಕಾರಿ ರಜೆ ದಿನಗಳಾದಲ್ಲಿ ಮುಂದಿನ ದಿನವನ್ನು ಪರಿಗಣಿಸತಕ್ಕದ್ದು.
- ★ ಹೆಚ್ಚಿನ ಮಾಹಿತಿಗಾಗಿ http://eproc.karnataka.gov.in ಈ ವೆಬ್‌ಸೈಟ್‌ನಲ್ಲಿ ಸಂಪರ್ಕಿಸಿ ವಿವರಗಳನ್ನು ಪಡೆಯಬಹುದು.

ಈ ಟೆಂಡರ್ ಪ್ರಕ್ರಿಯೆಯಲ್ಲಿ ಯಾವುದಾದರೂ ತಿದ್ದುಪಡಿಗಳಿದ್ದರೆ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು.

ಟೆಂಡರ್‌ಗೆ ಸಂಬಂಧಿಸಿದಂತೆ, ಸಾಮಾನ್ಯ ಷರತ್ತುಗಳು (ಅರ್ಹತಾ ಷರತ್ತುಗಳು) ಮತ್ತು ನಿಬಂಧನೆಗಳನ್ನು ಟೆಂಡರ್ ಫಾರಂನೊಂದಿಗೆ ಪಡೆಯಬಹುದು.

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಪ್ರಕರಣ 8 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲೆ ಹೇಳಿದ ಟೆಂಡರ್‌ನ ವಿವರಗಳನ್ನು ಪ್ರಕಟಿಸಲಾಗಿದೆ.

**ಫೈರೋಜಾ ಖಾನಂ**

ಪಿ.ಆರ್. 479 ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

**ಪೊಲೀಸ್ ಅಧೀಕ್ಷಕರವರ ಕಛೇರಿ, ಶಿವಮೊಗ್ಗ ಜಿಲ್ಲೆ**

**ನಂ: ಲೆಕ್ಕ(6)ವಾ.ವಿ/138/2008–09, ಶಿವಮೊಗ್ಗ, ದಿನಾಂಕ: 15ನೇ ಜೂನ್ 2009**

**ಟೆಂಡರ್ ಕಂ ಬಹಿರಂಗ ಹರಾಜು ಅಧಿಸೂಚನೆ**

**ವಿಷಯ:** ಶಿವಮೊಗ್ಗ ಜಿಲ್ಲೆಯ ನಿರುಪಯುಕ್ತ ಪೊಲೀಸ್ ವಾಹನಗಳನ್ನು ಟೆಂಡರ್ ಕಂ ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:**1) ಸರ್ಕಾರಿ ಆದೇಶ ನಂ:ಹೆಚ್‌ಡಿ/19/ಇಎಂವಿ/09 ದಿ: 12–05–09

2) ಸರ್ಕಾರಿ ಆದೇಶ ನಂ:ಸಿಆಸುಇ/142/ಶಿವಾನಿ/2000 ದಿ: 05–01–2001

3) ಪ್ರಧಾನ ಕಛೇರಿ ಆದೇಶ ಸಂ.ವಾಸಾ(1)/18/2008–09 ದಿ: 23–05–2009.

ಸಾರ್ವಜನಿಕರ ಮಾಹಿತಿಗಾಗಿ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಶಿವಮೊಗ್ಗ ಈ ಕಛೇರಿಯ ಆವರಣದಲ್ಲಿ ಯಥಾ ಸ್ಥಿತಿಯಲ್ಲಿರುವ ಕೆಳಕಂಡ 18ಸಂಖ್ಯೆ ಪೊಲೀಸ್ ವಾಹನಗಳನ್ನು ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ಶಿವಮೊಗ್ಗ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕಛೇರಿಯ ಆವರಣದಲ್ಲಿ **ದಿ: 28–07–2009 ರಂದು ಬೆಳಿಗ್ಗೆ 11–00 ಗಂಟೆಗೆ** ಬಹಿರಂಗ ಹರಾಜು ಮಾಡಲಾಗುವುದು. ಇಚ್ಛೆಯುಳ್ಳ ಸಾರ್ವಜನಿಕರು ಸದರಿ ಟೆಂಡರ್ ಕಂ ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ನಿರುಪಯುಕ್ತಗೊಳಿಸಿದ ವಾಹನವನ್ನು ಖರೀದಿಸಬಹುದಾಗಿದೆ.

**ಹರಾಜು ಮಾಡಲು ಉದ್ದೇಶಿಸಿರುವ ವಾಹನಗಳ ವಿವರ**

| ಕ್ರ. ಸಂ. | ನೊಂದಣಿ ಸಂ | ಮಾಡೆಲ್ | ಖರೀದಿಸಿದ ವರ್ಷ |
|---|---|---|---|
| 1. | ಕೆಎ–14–ಜಿ–151 | ಮಹೀಂದ್ರ ಮಾರುತಿ ಜಿಪ್ಸಿ ಜೀಪು | 1992 16–ವರ್ಷ |
| 2. | ಕೆಎ–14–ಜಿ–376 | ಮಹೀಂದ್ರ ಕ್ಯಾಬ್ ಕಿಂಗ್ | 1996 12–ವರ್ಷ |
| 3. | ಕೆಎ–14–ಜಿ–377 | ಮಹೀಂದ್ರ ಕ್ಯಾಬ್ ಕಿಂಗ್ | 1996 12–ವರ್ಷ |
| 4. | ಕೆಎ–14–ಜಿ–0084 | ಮಹೀಂದ್ರ ಜೀಪು | 1991 17–ವರ್ಷ |
| 5. | ಕೆಎ–14–ಜಿ–0039 | ಮೆಟಡೋರ್ | 1990 18–ವರ್ಷ |
| 6. | ಎಂಇಎಸ್–2001 | ಬುಲೆಟ್ ಮೋಟಾರ್ ಸೈಕಲ್ | 1976 32–ವರ್ಷ |
| 7. | ಎಂಇಎಸ್–2003 | ಬುಲೆಟ್ ಮೋಟಾರ್ ಸೈಕಲ್ | 1976 32–ವರ್ಷ |
| 8. | ಸಿಎಜಿ –7503 | ಬುಲೆಟ್ ಮೋಟಾರ್ ಸೈಕಲ್ | 1981 27–ವರ್ಷ |
| 9. | ಸಿಎಜಿ –7504 | ಬುಲೆಟ್ ಮೋಟಾರ್ ಸೈಕಲ್ | 1981 27–ವರ್ಷ |
| 10. | ಸಿಎಜಿ –7532 | ಬುಲೆಟ್ ಮೋಟಾರ್ ಸೈಕಲ್ | 1982 26–ವರ್ಷ |
| 11. | ಸಿಎಜಿ –7516 | ಬುಲೆಟ್ ಮೋಟಾರ್ ಸೈಕಲ್ | 1981 27–ವರ್ಷ |
| 12. | ಸಿಎಜಿ –7533 | ಬುಲೆಟ್ ಮೋಟಾರ್ ಸೈಕಲ್ | 1982 26–ವರ್ಷ |
| 13. | ಸಿಎಜಿ –7640 | ಬುಲೆಟ್ ಮೋಟಾರ್ ಸೈಕಲ್ | 1987 21–ವರ್ಷ |
| 14. | ಸಿಎಜಿ –7512 | ಬುಲೆಟ್ ಮೋಟಾರ್ ಸೈಕಲ್ | 1981 27–ವರ್ಷ |
| 15. | ಕೆಎ–14–ಜಿ–0027 | ಬುಲೆಟ್ ಮೋಟಾರ್ ಸೈಕಲ್ | 1990 18–ವರ್ಷ |
| 16. | ಕೆಎ–14–ಜಿ–0031 | ಬುಲೆಟ್ ಮೋಟಾರ್ ಸೈಕಲ್ | 1990 18–ವರ್ಷ |
| 17. | ಕೆಎ–14–ಜಿ–0034 | ಬುಲೆಟ್ ಮೋಟಾರ್ ಸೈಕಲ್ | 1990 18–ವರ್ಷ |
| 18. | ಕೆಎ–14–ಜಿ–0035 | ಬುಲೆಟ್ ಮೋಟಾರ್ ಸೈಕಲ್ | 1990 18–ವರ್ಷ |

**ಹರಾಜಿನ ಷರತ್ತುಗಳು ಮತ್ತು ನಿಬಂಧನೆಗಳು :–**

1) ಮೊಹರು ಮಾಡಿದ (ಸೀಲ್ಡ್ ಟೆಂಡರ್) ಲಕೋಟೆಯನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ನಿರುಪಯುಕ್ತ ವಾಹನ ಟೆಂಡರ್ ಸಂಖ್ಯೆ : ––––––––––––––––––––––– ನ್ನು ಖರೀದಿಸುವ ಬಗ್ಗೆ ಎಂಬುದನ್ನು ಪ್ರತ್ಯೇಕವಾಗಿ ಬಿಡಿ ಅಕ್ಷರಗಳಲ್ಲಿ ನಮೂದಿಸಬೇಕು.

2) ವಾಹನಗಳ ಖರೀದಿಗಾಗಿ ಸಲ್ಲಿಸಬಯಸುವ ಪ್ರತಿಯೊಬ್ಬ ಸವಾಲುದಾರನು ವಾಹನಕ್ಕೆ ರೂ. 3000–00 (ರೂ. ಮೂರು ಸಾವಿರ ಮಾತ್ರ) ಠೇವಣಿ ಹಣವನ್ನು ಡಿಡಿ / ನಗದು ಮೂಲಕ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ರವರ ಹೆಸರಿನಲ್ಲಿ ಅರ್ಜಿಯ ಜೊತೆ ನೀಡತಕ್ಕದ್ದು. ಠೇವಣಿ ಹಣಕ್ಕೆ ಬಡ್ಡಿಯನ್ನು ಕೊಡಲಾಗುವುದಿಲ್ಲ. ಠೇವಣಿ ಹಣವಿಲ್ಲದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಠೇವಣಿ ಇಲ್ಲದೆ ಕಳಿಸಲಾದ ಅರ್ಜಿಯನ್ನು ತಿರಸ್ಕರಿಸಲಾಗುವುದು.

3) ಈ ನಿರುಪಯುಕ್ತ ವಾಹನಗಳ ಖರೀದಿಗಾಗಿ ಹರಾಜಿನಲ್ಲಿ ಭಾಗವಹಿಸುವ ಆಸಕ್ತ ಸಾರ್ವಜನಿಕರು ಪ್ರತಿಯೊಂದು ವಾಹನಕ್ಕೆ ರೂ. 3000–00 ಗಳಂತೆ ಠೇವಣಿ ಹಣವನ್ನು ಹರಾಜಿನ ಮುನ್ನ ನಗದಾಗಿ ಪಾವತಿಸತಕ್ಕದ್ದು, ಠೇವಣಿ ಹಣವನ್ನು ಪಾವತಿಸದೇ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.

4) ಟೆಂಡರ್ ಫಾರ್ಮ್‌ನಲ್ಲಿ ಅತೀ ಹೆಚ್ಚಿನ ದರವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲಿಯೂ ಬರೆದಿರಬೇಕು. ಟೆಂಡರ್ ಫಾರ್ಮ್‌ನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಮಾಡಿದ್ದರೆ ಆ ಸ್ಥಳದಲ್ಲಿ ಟೆಂಡರ್‌ದಾರರು ಪೂರ್ಣ ಸಹಿ ಮಾಡಿ ದೃಢೀಕರಿಸಬೇಕು.

5) ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.

6) ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ: 27–07–2009 ರ ಸಂಜೆ 04–00 ಗಂಟೆಯ ಒಳಗಾಗಿ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.

7) ಟೆಂಡರ್‌ದಾರರು ಸಹ ಬಹಿರಂಗ ಹರಾಜಿನಲ್ಲಿ ಹೆಚ್ಚಿನ ಠೇವಣಿ ಹಣವಿಲ್ಲದೆ ಭಾಗವಹಿಸಬಹುದು.

8) ಜಿಲ್ಲಾ ಪೊಲೀಸ್ ಅಧೀಕ್ಷಕರುಗಳು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು. ಠೇವಣಿಯನ್ನು ತುಂಬಿದ ಟೆಂಡರ್‌ದಾರರು ಅಥವಾ ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.

9) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ (ದರವನ್ನು) ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್‌ಗಳನ್ನು ಜಿಲ್ಲಾ ಪೊಲೀಸ್ ಅಧಿಕಾರಿಗಳು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಸಾರ್ವಜನಿಕರ ಸಮಕ್ಷಮ ಬಹಿರಂಗ ಪಡಿಸುವರು. ಈ ಎರಡರಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸಿರುವರೋ ಅವರನ್ನು ಯಶಸ್ವಿ ಟೆಂಡರ್ ಸವಾಲುದಾರರೆಂದು ಪರಿಗಣಿಸಲಾಗುವುದು.

10) ಯಶಸ್ವಿಯಾದ ಟೆಂಡರ್‌ದಾರರು ಸವಾಲುದಾರರು ವಾಹನಗಳ ಒಟ್ಟು ಬೆಲೆಯ ಶೇ. 25% ರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು. ಉಳಿದ ಹಣವನ್ನು ಮಹಾನಿರ್ದೇಶಕರು ಮತ್ತು ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ರಾಜ್ಯ, ಬೆಂಗಳೂರುರವರು ಸದರಿ ಹರಾಜನ್ನು ಒಪ್ಪಿದ ನಂತರವೇ ಸಂಪೂರ್ಣ ಹಣ ಪಾವತಿ ಮಾಡಿ ತಮ್ಮ ಸ್ವಂತ ಖರ್ಚಿನಿಂದ ಹಾಗೂ 7 ದಿನಗಳ ಒಳಗಾಗಿ ವಾಹನಗಳನ್ನು ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಈಗಾಗಲೇ ಇವರು ತುಂಬಿರುವ ಶೇಕಡಾ 25% ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆ ಹೊರಡಿಸಿ ಮರು ಹರಾಜು ಮಾಡಲಾಗುವುದು. ಮರು ಹರಾಜಿನಲ್ಲಿ ಸರ್ಕಾರಕ್ಕೆ ಏನಾದರೂ ನಷ್ಟವಾದಲ್ಲಿ ಅಂದರೆ ಮೊದಲನೆಯ ಹರಾಜಿಗಿಂತ ಕಡಿಮೆಯಾದರೆ ಸದರಿಯವರಿಂದಲೇ ವಸೂಲಿ ಮಾಡಲಾಗುವುದು.

11) ಎಲ್ಲಾ ಹಣವನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರ ಕಛೇರಿಯಲ್ಲಿ ನಗದು ರೂಪದಲ್ಲಿ ತುಂಬಬೇಕು. ಚೆಕ್ಕುಗಳ ಮೂಲಕ ತುಂಬಿದ ಹಣವನ್ನು ಸ್ವೀಕರಿಸಲಾಗುವುದಿಲ್ಲ.

12) ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್‌ದಾರರು / ಸವಾಲುದಾರರ ಠೇವಣಿ ಹಣವನ್ನು ಕೂಡಲೇ ಹಿಂದಿರುಗಿಸಲಾಗುವುದು.

13) ಮಾರಾಟ ತೆರಿಗೆಯನ್ನು ಚಲಾವಣೆಯಲ್ಲಿದ್ದ ದರದ ನಿಯಮಗಳ ಆಧಾರದ ಮೇರೆಗೆ ಸವಾಲಿನ ಹಣದ ಜೊತೆಗೆ ವಸೂಲಿ ಮಾಡಲಾಗುವುದು.

14) ಹರಾಜು ಮಾಡುವ ವೇಳೆಯಲ್ಲಿ ಏನಾದರೂ ತರಕಾರುಗಳು ಬಂದಲ್ಲಿ ಜಿಲ್ಲಾ ಪೊಲೀಸ್ ಅಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಕೈಗೊಳ್ಳುವ ನಿರ್ಣಯವೇ ಅಂತಿಮವಾಗಿರುತ್ತದೆ.

15) ಹರಾಜಿನಲ್ಲಿ ಯಾವುದೇ ಸವಾಲನ್ನು / ಟೆಂಡರನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ಮುಂದೂಡುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರು ಹೊಂದಿರುತ್ತಾರೆ. ಹಾಗೂ ಇವರ ನಿರ್ಣಯವೇ ಅಂತಿಮವಾಗಿರುತ್ತದೆ.

16) ಇಚ್ಛೆಯುಳ್ಳ ಟೆಂಡರ್‌ದಾರರು ಮತ್ತು ಸವಾಲುದಾರರು ಹರಾಜು ಮಾಡಲಿಚ್ಚಿಸಿರುವ ನಿರುಪಯುಕ್ತ ವಾಹನಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಶಿವಮೊಗ್ಗ ಇವರ ಕಛೇರಿ ವೇಳೆಯಲ್ಲಿ ನೋಡಬಹುದು.

17) ಟೆಂಡರ್‌ದಾರರು ವಾಹನಗಳಿಗೆ ಅತೀ ಹೆಚ್ಚಿನ ಬೆಲೆಯನ್ನು ಅನುಬಂಧದಲ್ಲಿ ಕಾಣಿಸಿದ ನಮೂನೆಯಲ್ಲಿ ತೋರಿಸಬೇಕು.

**ಟೆಂಡರ್ ಫಾರಂ ನಮೂನೆ**

**ಅನುಪಯುಕ್ತ ಪೊಲೀಸ್ ವಾಹನಗಳಿಗಾಗಿ ಟೆಂಡರು**

ಗೆ,
ಪೊಲೀಸ್ ಸೂಪರಿಂಟೆಂಡೆಂಟ್ ರವರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಮಾನ್ಯರೇ,

ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ:ಪಿಎಂಟಿ/138/2008–09 ದಿನಾಂಕ: 15/06/2009 ರಲ್ಲಿ ತಿಳಿಸಿರುವ ನಿರುಪಯುಕ್ತವಾದ ವಾಹನಗಳು

1) ವಾಹನದ ಹೆಸರು ಮತ್ತು ಸಂಖ್ಯೆ: ರೂ. . . . . . . .(ರೂಪಾಯಿ . . . . . . . . . . . ) ಗಳಿಗೆ ಖರೀದಿಸಲು ಇಚ್ಛಿಸಿರುತ್ತೇನೆ.

ತಮ್ಮ ವಿಶ್ವಾಸಿ,
(ಬಿಡ್‌ದಾರರ ಪೂರ್ಣ ಸಹಿ ಮತ್ತು ವಿಳಾಸ)

ಪಿ.ಆರ್. 484 ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ.

**ಜಿಲ್ಲಾ ಪೊಲೀಸ್ ಕಛೇರಿ, ಹಾಸನ ಜಿಲ್ಲೆ, ಹಾಸನ**

**ಅಧಿಸೂಚನೆ**

**ಸಂಖ್ಯೆ:ಪಿಎಂಟಿ:110/2009–10, ದಿನಾಂಕ: 8ನೇ ಜೂನ್ 2009**

**ವಿಷಯ:** ಹಾಸನ ಜಿಲ್ಲಾ ಪೊಲೀಸ್ ಇಲಾಖೆಯ ಅನುಪಯುಕ್ತ ಪೊಲೀಸ್ ವಾಹನಗಳನ್ನು ಟೆಂಡರ್ ಕಂ. ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** ಪೊಲೀಸ್ ಪ್ರಧಾನ ಕಛೇರಿಯ ಆದೇಶ ಸಂಖ್ಯೆ: ವಾ.ಸಾ(1) 18/08–09 ದಿನಾಂಕ: 23.05.09.

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತಿಳಿಯಪಡಿಸುವುದೇನೆಂದರೆ, ದಿನಾಂಕ: 13.07.2009 ರಂದು ಬೆಳಿಗ್ಗೆ 11–00 ಗಂಟೆಗೆ ಸರಿಯಾಗಿ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕೇಂದ್ರಸ್ಥಾನದ ಪೆರೇಡ್ ಮೈದಾನ, ಹೊಸಲೈನ್ ರಸ್ತೆ ಹಾಸನದಲ್ಲಿ, ಹಾಸನ ಜಿಲ್ಲಾ ಪೊಲೀಸ್ ಇಲಾಖೆಯ ಕೆಳಕಂಡ ಅನುಪಯುಕ್ತ ವಾಹನಗಳ ಟೆಂಡರ್ ಕಂ. ಬಹಿರಂಗ ಹರಾಜು ಮೂಲಕ ವಿಲೇವಾರಿಗೊಳಿಸಲಾಗುವುದು. ಸದರಿ ಅನುಪಯುಕ್ತ ವಾಹನಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕೇಂದ್ರಸ್ಥಾನ, ಹೊಸಲೈನ್ ರಸ್ತೆಯಲ್ಲಿ ಕಛೇರಿಯ ವೇಳೆಯಲ್ಲಿ ನೋಡಲು ಅವಕಾಶವಿರುತ್ತದೆ. ಸದರಿ ಅನುಪಯುಕ್ತ ವಾಹನಗಳ ವಿವರಗಳನ್ನು ಈ ಕೆಳಗೆ ನಮೂದಿಸಲಾಗಿದೆ.

| ಕ್ರ. ಸಂ. | ವಾಹನ ಮಾದರಿ ಮತ್ತು ಸಂಖ್ಯೆ | ನಮೂನೆ |
|---|---|---|
| 1 | ಅಂಬಾಸಿಡರ್ ಕಾರು ಕೆಎ–13–ಜಿ–220 | 1993 15 ವರ್ಷ |
| 2 | ಅಂಬಾಸಿಡರ್ ಕಾರು ಕೆಎ–13–ಜಿ–122 | 1992 16 ವರ್ಷ |
| 3 | ಅಂಬಾಸಿಡರ್ ಕಾರು ಕೆಎ–01–ಜಿ–1145 | 1993 15 ವರ್ಷ |
| 4 | ಮಾರುತಿ ಜಿಪ್ಸಿ ಕೆಎ–13–ಜಿ–17 | 1991 17 ವರ್ಷ |
| 5 | ಬುಲೆಟ್ ಮೋಟಾರ್ ಸೈಕಲ್ ಸಿಎಜಿ–5615 | 1980 28 ವರ್ಷ |
| 6 | ಬುಲೆಟ್ ಮೋಟಾರ್ ಸೈಕಲ್ ಸಿಎಜಿ–5611 | 1980 28 ವರ್ಷ |
| 7 | ಬುಲೆಟ್ ಮೋಟಾರ್ ಸೈಕಲ್ ಸಿಎಜಿ–5610 | 1980 28 ವರ್ಷ |
| 8 | ಬುಲೆಟ್ ಮೋಟಾರ್ ಸೈಕಲ್ ಸಿಎಜಿ–5709 | 1987 21 ವರ್ಷ |

**ಹರಾಜಿನ ಷರತ್ತುಗಳು ಮತ್ತು ನಿಬಂಧನೆಗಳು:–**

1) ಸದರಿ ಅನುಪಯುಕ್ತ ವಾಹನಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆ ಹೊಸಲೈನ್ ರಸ್ತೆ ಹಾಸನದಲ್ಲಿ ಬಹಿರಂಗ ಹರಾಜು ಮಾಡಲಾಗುವುದು. ಅವುಗಳು ಹಾಲಿ ಯಾವ ಸ್ಥಿತಿಯಲ್ಲಿ ಇದೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.

2) ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಪ್ರತಿಯೊಬ್ಬರು ಪ್ರತಿ ವಾಹನ ಒಂದಕ್ಕೆ ರೂ.3,000–00 ಠೇವಣಿಯನ್ನು ಹರಾಜಿಗೆ ಮುನ್ನ ನಗದಾಗಿ ಪಾವತಿಸತಕ್ಕದ್ದು. ಠೇವಣಿ ಪಾವತಿಸದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.

3) ಟೆಂಡರುಗಳನ್ನು ಸಲ್ಲಿಸಬಯಸುವ ಸಾರ್ವಜನಿಕರು ಮೊಹರು ಮಾಡಿದ ಲಕೋಟೆಯ ಮೇಲ್ಭಾಗದಲ್ಲಿ "ನಿರುಪಯುಕ್ತ ವಾಹನಗಳಿಗಾಗಿ" ಎಂದು ಬರೆದು ಅದರಡಿಯಲ್ಲಿ ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ, ಹಾಸನ

ಎಂದು ನಮೂದಿಸಿ ಈ ವಿಳಾಸಕ್ಕೆ ಖುದ್ದಾಗಿ ಇಲ್ಲವೇ ಅಂಚೆ ಮೂಲಕ ದಿನಾಂಕ: 12.07.2009 ರಂದು ಸಂಜೆ 4.00 ಗಂಟೆ ಒಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸತಕ್ಕದ್ದು. ನಂತರ ಬಂದ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.

4) ಪ್ರತಿಯೊಬ್ಬ ಟೆಂಡರುದಾರರು ಪ್ರತಿ ವಾಹನಕ್ಕೆ ರೂ. 3,000–00 (ಮೂರು ಸಾವಿರ) ರೂಪಾಯಿಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ, ಇವರ ಹೆಸರಿನಲ್ಲಿ ತೆಗೆಸಿದ ಡಿ.ಡಿ.ಯನ್ನು ಟೆಂಡರ್ ಜೊತೆ ಲಗತ್ತಿಸಬೇಕು. ಡಿ.ಡಿ. ಯನ್ನು ಕ್ರಾಸ್ ಮಾಡಬಾರದು. ಹಾಗೆ ಮಾಡಿದಲ್ಲಿ ಅದನ್ನು ಅನರ್ಹವೆಂದು ಪರಿಗಣಿಸಲಾಗುವುದು.

5) ಯಾವುದೇ ಠೇವಣಿ ಹಣಕ್ಕೆ ಬಡ್ಡಿ ಕೊಡಲಾಗುವುದಿಲ್ಲ. ಹಾಗೂ ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.

6) ಟೆಂಡರ್ ಫಾರಂನಲ್ಲಿ ಹೆಚ್ಚಿನ ಮೊತ್ತವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಢೀಕರಿಸಿರಬೇಕು.

7) ಈ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆ ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ, ಅವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಾಗಲೀ ಸಾರ್ವಜನಿಕರ ಸಮ್ಮುಖದಲ್ಲಿ ಬಹಿರಂಗಪಡಿಸುವರು. ಹರಾಜಿನಲ್ಲಿ ದಾಖಲಾದ ಹೆಚ್ಚಿನ ಬಿಡ್ ಬೆಲೆ ಅಥವಾ ಟೆಂಡರಿನಲ್ಲಿ ದಾಖಲಿಸಿದ ಹೆಚ್ಚಿನ ಬೆಲೆ ಇವೆರಡರಲ್ಲಿ ಅತೀ ಹೆಚ್ಚಿನ ದರ ದಾಖಲಿಸಿದವರನ್ನು ಯಶಸ್ವಿ ಟೆಂಡರ್:ಬಿಡ್‌ದಾರರೆಂದು ಪರಿಗಣಿಸಲಾಗುವುದು.

8) ಯಶಸ್ವಿಯಾದವರ ಅಂಗೀಕೃತ ಹೆಚ್ಚಿನ ಬೆಲೆಯಲ್ಲಿ ಶೇಕಡ 25 ರಷ್ಟು ಹಣವನ್ನು ಅವರು ಹರಾಜಿನಲ್ಲಿ ಸ್ಥಳದಲ್ಲಿ ಹರಾಜಿನ ದಿನವೇ ತುಂಬತಕ್ಕದ್ದು. ಈ ಹಣಕ್ಕೂ ಯಾವುದೇ ಬಡ್ಡಿ ನೀಡಲಾಗುವುದಿಲ್ಲ. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕರ್ನಟಕ ರಾಜ್ಯ, ಬೆಂಗಳೂರು ರವರಿಂದ ವಿಲೇವಾರಿಗೆ ಒಪ್ಪಿಗೆ ಬಂದ ನಂತರವೇ ಉಳಿದ ಹಣವನ್ನು ಹಾಗೂ ಮಾರಾಟ ತೆರಿಗೆ ಇತ್ಯಾದಿಯನ್ನು ಕಟ್ಟಿಸಿಕೊಳ್ಳಲಾಗುವುದು. ಹಾಗೂ ಪ್ರಾದೇಶಿಕ ಶುಲ್ಕ ವಗೈರೆ ಅವರ ಸ್ವಂತ ಹಣದಿಂದ ಭರಿಸಿ ಮಾಲೀಕತ್ವ ಬದಲಾವಣೆ ಮಾಡಿಕೊಂಡ ಬಗ್ಗೆ ದಾಖಲಾತಿಗಳನ್ನು ಒದಗಿಸಿದ ನಂತರ ಇಲ್ಲವೇ ವಾಹನ ಉಪಯೋಗಿಸದೇ ಕುಟ್ಟು ಗುಜರಿಗೆ ಹಾಕಲಾಗುವುದೆಂದು ಬರೆದುಕೊಟ್ಟ ಮೇಲೆ ಅವರ ಸ್ವಂತ ಖರ್ಚಿನಲ್ಲಿ ಸಾಗಿಸಿಕೊಳ್ಳಲು ವಾಹನಗಳನ್ನು ಯಶಸ್ವಿದಾರರ ವಶಕ್ಕೆ ವಹಿಸಿಕೊಡಲಾಗುವುದು.

9) ಎಲ್ಲಾ ಹಣವನ್ನು ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ, ಹಾಸನ ಇವರ ಕಛೇರಿಯ ನಗದು ಶಾಖೆಯಲ್ಲಿ ನಗದಾಗಿಯೇ ತುಂಬಬೇಕು. ಚೆಕ್ ಅಥವಾ ಡಿಡಿ ಮೂಲಕ ಹಣ ಸ್ವೀಕರಿಸುವುದಿಲ್ಲ.

10)ಅನುಪಯುಕ್ತ ವಾಹನಗಳಿಗೆ ಮಾರಾಟ ತೆರಿಗೆಯನ್ನು ಯಶಸ್ವಿ ಬಿಡ್‌ದಾರರಿಂದ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ವಿಧಿಸಿ ವಸೂಲು ಮಾಡಲಾಗುವುದು.

11) ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರು:ಬಿಡ್‌ದಾರರ ಠೇವಣಿ ಹಣವನ್ನು ಕೂಡಲೇ ಹಿಂತಿರುಗಿಸಲಾಗುವುದು. ಸಾರ್ವಜನಿಕರು ಇಲಾಖಾ ನಿಯಮಗಳಿಗೆ ಬದ್ಧರಾಗಿರತಕ್ಕದ್ದು.

12)ಯಶಸ್ವಿಯಾದ ಟೆಂಡರ್:ಬಿಡ್‌ದಾರರು ತಮ್ಮ ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹವರು ಮುಂಗಡವಾಗಿ ಪಾವತಿಸಿರುವ ಹಣದಲ್ಲಿ ನಷ್ಟವನ್ನು ಮಾಡಿಕೊಳ್ಳುವ ಅಧಿಕಾರವನ್ನು ಕಾಯ್ದಿರಿಸಲಾಗಿದೆ. ಈ ರೀತಿ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು. ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ರೀತಿ ಕ್ರಮ ಜರುಗಿಸಲಾಗುವುದು.

13)ಈ ಹರಾಜಿನ ವಿಷಯದಲ್ಲಿ ಯಾವುದೇ ಕಾರಣಕ್ಕಾಗಿ ರದ್ದು ಮಾಡುವ ಇಲ್ಲವೇ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಹಾಸನ ಇವರು ಹೊಂದಿರುತ್ತಾರೆ. ಮತ್ತು ಇವರ ತೀರ್ಮಾನವೇ ಅಂತಿಮವಾದದ್ದು.

14)ಮೇಲೆ ತಿಳಿಸಿರುವ ಹರಾಜಿನ ವಿಷಯದಲ್ಲಿ ಯಾವುದೇ ವಾದ–ವಿವಾದ ಉಂಟಾದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರು ಮಾಡುವ ನಿರ್ಣಯವೇ ಅಂತಿಮವಾಗಿರುತ್ತದೆ.

15)ಹರಾಜಿನಲ್ಲಿ ಭಾಗವಹಿಸುವ ಎಲ್ಲಾ ಬಿಡ್‌ದಾರರು ತಮ್ಮ ಪರಿಪೂರ್ಣ ವಿಳಾಸವನ್ನು ಬರೆದಿರುವ ಚೀಟಿಯೊಂದಿಗೆ ಠೇವಣಿ ಹಣವನ್ನು ಪಾವತಿ ಮಾಡಿ ಹೆಸರನ್ನು ನೊಂದಾಯಿಸಿಕೊಳ್ಳತಕ್ಕದ್ದು.

16)ಟೆಂಡರ್ ಫಾರಂಗಳಲ್ಲಿ ಟೆಂಡರ್‌ದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸಿರಬೇಕು. ಟೆಂಡರ್ ಫಾರಂ ನಮೂನೆಯನ್ನು ಈ ಕೆಳಗೆ ಕೊಡಲಾಗಿದೆ.

ಸೂಪರಿಂಟೆಂಡೆಂಟ್ ಆಫ್–ಪೊಲೀಸ್, ಹಾಸನ ಜಿಲ್ಲೆ, ಹಾಸನ.

**ಟೆಂಡರ್ ಫಾರಂ ನಮೂನೆ**

**ಅನುಪಯುಕ್ತ ಪೊಲೀಸ್ ವಾಹನಗಳಿಗಾಗಿ ಟೆಂಡರು**

ಗೆ,

ಪೊಲೀಸ್ ಸೂಪರಿಂಟೆಂಡೆಂಟ್ ರವರು,

ಹಾಸನ ಜಿಲ್ಲೆ, ಹಾಸನ.

ಮಾನ್ಯರೇ,

ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ:ಪಿಎಂಟಿ:110:02–2005 ದಿನಾಂಕ: 08.06.2009 ರಲ್ಲಿ ತಿಳಿಸಿರುವ ಸಂಖ್ಯೆಯ ವಾಹನವನ್ನು ರೂ. /– (ರೂಪಾಯಿ )ಗಳಿಗೆ ಖರೀದಿಸಲು ಇಚ್ಛಿಸಿರುತ್ತೇನೆ.

ತಮ್ಮ ವಿಶ್ವಾಸಿ,

ಪಿ.ಆರ್. 488 (ಬಿಡ್‌ದಾರರ ಪೂರ್ಣ ಸಹಿ ಮತ್ತು ವಿಳಾಸ)

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಛೇರಿ,**

**ಸರ್ಕಾರಿ ಕೇಂದ್ರ ಮುದ್ರಣಾಲಯ, ಮೈಸೂರು ರಸ್ತೆ, ಬೆಂಗಳೂರು – 560 059**

**ಸಂಕ್ಷಿಪ್ತ ಟೆಂಡರ್ ಅಧಿಸೂಚನೆ**

**ಸಂಖ್ಯೆ: ಡಿಪಿಎಸ್/ಪಿಯುಆರ್/ಬಿ–36/2009–10, ದಿನಾಂಕ: 22ನೇ ಜೂನ್ 2009**

ಕರ್ನಾಟಕ ಸರ್ಕಾರದ ವಿವಿಧ ಸಚಿವಾಲಯಗಳು ಮತ್ತು ಇಲಾಖೆಗಳಲ್ಲಿನ ಫೋಟೋ ಕಾಪಿಯಿಂಗ್ ಯಂತ್ರಗಳು, ಲೇಸರ್ ಪ್ರಿಂಟರ್‌ಗಳು, ಇಂಕ್ ಜೆಟ್ ಪ್ರಿಂಟರ್‌ಗಳು, ಡಾಟ್‌ಮ್ಯಾಟ್ರಿಕ್ಸ್ ಪ್ರಿಂಟರ್‌ಗಳಲ್ಲಿ ಬಳಸಲು ಬೇಕಾದ ಟೋನರ್ ಇಂಕ್, ಮಾಸ್ಟರ್ ರೋಲ್ ಮತ್ತು ಇನ್ನಿತರ ಬಳಕೆ ಸಾಮಗ್ರಿಗಳನ್ನು ಸರಬರಾಜು ಮಾಡಲು ಅರ್ಹ ಹಾಗೂ ಅಧಿಕೃತ ಮಾರಾಟಗಾರ ಸಂಸ್ಥೆಗಳಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಮೇರೆಗೆ ದ್ವಿಲಕೋಟೆ ಪದ್ಧತಿಯಲ್ಲಿ ವಾರ್ಷಿಕ ದರ ಗುತ್ತಿಗೆಗಾಗಿ ಟೆಂಡರ್ ಕರೆಯಲಾಗಿದೆ. ಟೆಂಡರ್ ಅಂದಾಜು ಮೌಲ್ಯ ರೂ. 50.0 ಲಕ್ಷ, ಭದ್ರತಾ ಠೇವಣಿ ರೂ. 1.5 ಲಕ್ಷ ಟೆಂಡರ್ ಫಾರಂಗಳನ್ನು ಮೇಲ್ಕಂಡ ಕಛೇರಿಯಲ್ಲಿ ರೂ. 1000/– + ವ್ಯಾಟ್ ರೂ. 125/– ಪಾವತಿಸಿ ಕಛೇರಿ ವೇಳೆಯಲ್ಲಿ ದಿನಾಂಕ: 25/06/2009 ರಿಂದ ದಿನಾಂಕ: 24/07/2009ರ ಮಧ್ಯಾಹ್ನ 4.30 ಗಂಟೆಯವರೆಗೆ ಪಡೆಯಬಹುದಾಗಿದೆ. ಮೊಹರಾದ ಟೆಂಡರ್‌ಗಳನ್ನು ದಿನಾಂಕ: 25/07/2009 ರ ಮಧ್ಯಾಹ್ನ 3.00 ಗಂಟೆವರೆಗೆ ಸ್ವೀಕರಿಸಲಾಗುವುದು. ಹಾಗೂ ಲಕೋಟೆ – I ನ್ನು (ತಾಂತ್ರಿಕ ಬಿಡ್) ಅದೇ ದಿನ ಮಧ್ಯಾಹ್ನ 3.30 ಗಂಟೆಗೆ ತೆರೆಯಲಾಗುವುದು ಲಕೋಟೆ – II ನ್ನು ದಿನಾಂಕ: 28/07/2009 ರಂದು ಮಧ್ಯಾಹ್ನ 3.00 ಗಂಟೆಗೆ ತೆರೆಯಲಾಗುವುದು ಅಥವಾ ನಂತರ ಸೂಚಿಸಲಾಗುವುದು.

ಹೆಚ್ಚಿನ ವಿವರಗಳಿಗೆ ಮೇಲ್ಕಂಡ ಕಛೇರಿಯನ್ನು ಸಂಪರ್ಕಿಸಬಹುದು.

ಪಿ.ಆರ್. 486 ನಿರ್ದೇಶಕರು

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ರದ್ದಿಯಾತಿ ಅಧಿಸೂಚನೆ**

**ನಂ. ಸಿಬ್ಬಂದಿ (2) ಸಿಆರ್/88/08–09, ದಿನಾಂಕ: 16ನೇ ಜೂನ್ 2009**

ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ವಿಷಯವು ಸರ್ಕಾರದ ಪರಿಶೀಲನೆಯಲ್ಲಿದ್ದು, ಸರ್ಕಾರದಿಂದ ನಿರ್ದೇಶನ ಬರುವವರೆಗೆ ಗ್ರಾಮ ಲೆಕ್ಕಿಗರ ನೇಮಕಾತಿ ಪ್ರಕ್ರಿಯೆಯನ್ನು ಮುಂದುವರೆಸಬಾರದೆಂದು ಸರ್ಕಾರ ತಿಳಿಸಿರುವ ಮೇರೆಗೆ ಈ ಕಛೇರಿಯಿಂದ ಹೊರಡಿಸಲಾಗಿರುವ ಗ್ರಾಮಲೆಕ್ಕಾಧಿಕಾರಿಗಳ ನೇರ ನೇಮಕಾತಿ ಅಧಿಸೂಚನೆ ಸಂಖ್ಯೆ:ಸಿಬ್ಬಂದಿ (2) ಸಿಆರ್/88/08–09 ದಿನಾಂಕ: 29.05.2009 ನ್ನು ಸರ್ಕಾರದ ಮುಂದಿನ ಆದೇಶದವರೆಗೆ ರದ್ದುಪಡಿಸಿದೆ.

ಪಿ.ಆರ್. 492 ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ.

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಮಂಗಳೂರು ವಿಭಾಗ, ಮಂಗಳೂರು**

**ಇ–ಟೆಂಡರ್ – ಟೆಂಡರ್ ಪ್ರಕಟಣೆ (ದ್ವಿಲಕೋಟೆ ಪದ್ಧತಿ)**

**ಲೋ.ಇ:ಮಂ.ವಿ:ಟಿ.ಎನ್.ಡಿ(12ಇ):2009–10:ಎಇ1, ಮಂಗಳೂರು, ದಿನಾಂಕ: 23ನೇ ಜೂನ್ 2009**

1 ಈ ಕೆಳಗೆ ತಿಳಿಸಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಇ–ಟೆಂಡರ್‌ನ್ನು ಕರ್ನಾಟಕ ಸರಕಾರದ ರಾಜ್ಯಪಾಲರ ಪರವಾಗಿ ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್ಜಾಲದ ವೆಬ್‌ಸೈಟ್

https://eproc.karnataka.gov.in ನಲ್ಲಿ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ಅರ್ಹರಾದ ಗುತ್ತಿಗೆದಾರರಿಂದ ಅಲ್ಪಾವಧಿ ಟೆಂಡರ್‌ನ್ನು ದ್ವಿಲಕೋಟೆ ಪದ್ಧತಿಯಲ್ಲಿ ಆಹ್ವಾನಿಸಿರುತ್ತಾರೆ. ಟೆಂಡರುದಾರರು ಟೆಂಡರ್ ನಿಯಮಾವಳಿಯ ಕ್ಲಾಜ್ 3 ರಂತೆ ಕನಿಷ್ಟ ಅರ್ಹತೆಯನ್ನು ಪಡೆದಿರಬೇಕು ಎಂಬುದನ್ನು ಗಮನಿಸಲು ಸೂಚಿಸಲಾಗಿದೆ.

2. ದಿನಾಂಕ: 7.7.2009 ರಿಂದ 13.7.2009ರ ವರೆಗೆ ಟೆಂಡರುದಾರರು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ ಮುಖಾಂತರ ಟೆಂಡರು ಡಾಕ್ಯುಮೆಂಟ್‌ಗಳನ್ನು ಪಡೆಯಬಹುದಾಗಿರುತ್ತದೆ. (Download).
3. ಟೆಂಡರುಗಳು ಈ ಕೆಳಗೆ ನೀಡಲಾದ ವಿವರದಂತೆ ಕಾಮಗಾರಿಗೆ ನಿಗದಿಪಡಿಸಿದ ಇ.ಎಂ.ಡಿಯನ್ನು ಟೆಂಡರ್ ಜೊತೆಯಲ್ಲಿ ಲಗತ್ತಿಸಬೇಕು. ಇ.ಎಂ.ಡಿ.ಯನ್ನು ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ಸೂಚಿಸಿರುವಂತೆ ಯಾವುದಾದರೂ ಒಂದು ರೀತಿಯಲ್ಲಿ ಸಲ್ಲಿಸಬಹುದಾಗಿರುತ್ತದೆ ಮತ್ತು ಅದರ ಊರ್ಜಿತ ಅವಧಿಯು ಟೆಂಡರು ಊರ್ಜಿತ ಅವಧಿಗಿಂತ 45 ದಿನಗಳು ಹೆಚ್ಚಾಗಿ ಇರಬೇಕು.
4. ಟೆಂಡರುಗಳನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಆನ್‌ಲೈನ್‌ನಲ್ಲಿ ದಿನಾಂಕ: 13.7.2009ರ ಅಪರಾಹ್ನ 4.00 ಗಂಟೆ (16 :00 ಗಂಟೆ) ಒಳಗೆ ಸಲ್ಲಿಸತಕ್ಕದ್ದು. ಟೆಂಡರನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಮಾರ್ಗಸೂಚಿಯಂತೆ ತೆರೆಯಲಾಗುವುದು.
5. ಹೆಚ್ಚಿನ ವಿವರಗಳನ್ನು ಟೆಂಡರು ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದಾಗಿರುತ್ತದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ. ಠೇವಣಿ (ಲಕ್ಷ ರೂ.ಗಳಲ್ಲಿ) | ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ಕಾಲಾವಧಿ (ಮಳೆಗಾಲ ಸೇರಿ) |
|---|---|---|---|---|---|
| **I** | **ಲೆಕ್ಕ ಶೀರ್ಷಿಕೆ 4202 ಶಿಕ್ಷಣ** | | | | |
| 1 | ದಕ್ಷಿಣ ಕನ್ನಡ ಜಿಲ್ಲೆ ಬೆಳ್ತಂಗಡಿಯಲ್ಲಿರುವ ಸರಕಾರಿ ಪ್ರಥಮ ದರ್ಜೆ ಕಾಲೇಜಿಗೆ ಸಭಾಂಗಣ ರಚನೆ ಎರಡು ಹೆಚ್ಚುವರಿ ಕೊಠಡಿ, ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರಿಗಾಗಿ ಶೌಚಾಲಯ ನಿರ್ಮಾಣ ಹಾಗೂ ಕಾಲೇಜು ಮೈದಾನದಲ್ಲಿ ಕ್ರೀಡಾಂಗಣ ನಿರ್ಮಾಣ (5ನೇ ಕರೆ) | 62.00 | 1.24 | 2500.00 | 12 ತಿಂಗಳು |

ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

ಪಿ.ಆರ್. 498

**ಅರಣ್ಯ ಇಲಾಖೆ**

**ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಶಿವಮೊಗ್ಗ ವೃತ್ತ, ಶಿವಮೊಗ್ಗ**

**ಸಂಖ್ಯೆ:ಎ1(ಬಿ5)ಸಿಬ್ಬಂದಿ–ಆಕ–ಸಿಆರ್–05/09–10, ದಿನಾಂಕ: 20ನೇ ಜೂನ್ 2009.**

**ಭಾಗಶಃ ತಿದ್ದುಪಡಿ ಅಧಿಸೂಚನೆ**

**ವಿಷಯ:** 2009–10ನೇ ಸಾಲಿನಲ್ಲಿ ಶಿವಮೊಗ್ಗ ಅರಣ್ಯ ವೃತ್ತದಲ್ಲಿ ಆನೆ ಕಾವಾಡಿಗಳ ಹುದ್ದೆಗೆ ನೇರನೇಮಕಾತಿ ಮೂಲಕ ಭರ್ತಿ ಮಾಡುವ ಕುರಿತು.

**ಉಲ್ಲೇಖ:** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಇವರ ಕಛೇರಿ ಪತ್ರ ಸಂಖ್ಯೆ:ಬಿ3–ಸಿಬ್ಬಂದಿ–ವಿವ–170/2000–01ದಿನಾಂಕ:30–03–2009 ಮತ್ತು 19–6–2009.
2. ಈ ಕಛೇರಿ ಅಧಿಸೂಚನೆ ಸಮಸಂಖ್ಯೆ ದಿನಾಂಕ 2–6–2009.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ರವರ ಉಲ್ಲೇಖ(1)ರ ಪತ್ರ ದಿನಾಂಕ 19–06–2009 ರಲ್ಲಿ ತಿಳಿಸಿರುವಂತೆ ಆನೆ ಕವಾಡಿಗಳ ನೇರನೇಮಕಾತಿ ಸಂಬಂಧ ಅರ್ಜಿಗಳನ್ನು ಸಲ್ಲಿಸಲು ದಿನಾಂಕವನ್ನು 27–06–2009 ಕ್ಕೆ ಕಾಲವಿಸ್ತರಣೆ ಮಾಡಲಾಗಿದೆ. ಹಾಗೂ ದಿನಾಂಕ 02–06–2009 ರಂದು ಹೊರಡಿಸಿರುವ ಅಧಿಸೂಚನೆಗೆ ಈ ಕೆಳಗಿನಂತೆ ಭಾಗಶಃ ತಿದ್ದುಪಡಿ ಮಾಡಲಾಗಿದೆ.

ಪುಟ ಸಂಖ್ಯೆ 1 ರ ಟೇಬಲ್‌ನ್ನು ಈ ಕೆಳಗಿನಂತೆ ಓದಿಕೊಳ್ಳುವುದು.

**ಹುದ್ದೆಗಳ ಮೀಸಲಾತಿ ವರ್ಗೀಕರಣ**

ವಿಭಾಗ: **ವನ್ಯಜೀವಿ ವಿಭಾಗ ಶಿವಮೊಗ್ಗ: 06 ಹುದ್ದೆ**

| ಪ್ರವರ್ಗ ನೇರ ಮೀಸಲಾತಿ (Vertical Reservation) | ಸಮತಳ ಮೀಸಲಾತಿ (Horizontal Reservation) | | | | | | | ಒಟ್ಟು |
|---|---|---|---|---|---|---|---|---|
| | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಅಂಗವಿಕಲ ಅಭ್ಯರ್ಥಿ | ಮಾಜಿ ಸೈನಿಕ | ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿ | ಯೋಜನೆಯಿಂದ ನಿರಾಶ್ರಿತಗೊಂಡ ಅಭ್ಯರ್ಥಿ | |
| ಪರಿಶಿಷ್ಟ ಜಾತಿ | 1 | | | | | | | 1 |
| ಸಾಮಾನ್ಯ ಅರ್ಹತೆ | 1 | 1 | 1 | | | | | 3 |
| ಪರಿಶಿಷ್ಟ ಪಂಗಡ | 1 | | | | | | | 1 |
| ಪ್ರವರ್ಗ–I | 1 | | | | | | | 1 |
| ಪ್ರವರ್ಗ–II (ಎ) | | | | | | | | |
| ಪ್ರವರ್ಗ–II (ಬಿ) | | | | | | | | |
| ಪ್ರವರ್ಗ–IIII (ಎ) | | | | | | | | |
| ಪ್ರವರ್ಗ–III(ಬಿ) | | | | | | | | |
| **ಒಟ್ಟು** | **4** | **1** | **1** | | | | | **6** |

ಪುಟಸಂಖ್ಯೆ 2 ರ ವಯೋಮಿತಿಗೆ ಸಂಬಂಧಿಸಿದಂತೆ ಈ ಕೆಳಗಿನಂತೆ ಓದಿಕೊಳ್ಳುವುದು.

3.4 **ವಯೋಮಿತಿ:–**

ಕರ್ನಾಟಕ ನಾಗರೀಕ ಸೇವಾ ನಿಯಮಗಳು (ಸಾಮಾನ್ಯ ನೇಮಕಾತಿ)–1977ರ ನಿಯಮ 6 ರಂತೆ ಅರ್ಜಿ ಸಲ್ಲಿಸಲು ನೇಮಕಾತಿ ಬಗ್ಗೆ ಹೊರಡಿಸಿರುವ ಅಧಿಸೂಚನೆ ದಿನಾಂಕದಂದು ಅಭ್ಯರ್ಥಿಗೆ ಕನಿಷ್ಟ 18 ವರ್ಷ ವಯಸ್ಸಾಗಿರಬೇಕು. ಮತ್ತು ಈ ಕೆಳಕಂಡಂತೆ ಗರಿಷ್ಟ ವಯೋಮಿತಿ ಮೀರಿರಬಾರದು.

| | |
|---|---|
| ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ –1 | ಗರಿಷ್ಟ ವಯೋಮಿತಿ 40 ವರ್ಷಗಳು. |
| ಇತರ ಪ್ರವರ್ಗಗಳು ಅಂದರೆ 2(ಎ) ಅಥವಾ 2 (ಬಿ) ಅಥವಾ 3 (ಎ) ಅಥವಾ 3 (ಬಿ) | ಗರಿಷ್ಟ ವಯೋಮಿತಿ 38 ವರ್ಷಗಳು. |
| ಇತರೆ ಅಭ್ಯರ್ಥಿಗಳಿಗೆ | ಗರಿಷ್ಟ ವಯೋಮಿತಿ 35 ವರ್ಷಗಳು |

ಉಳಿದಂತೆ ದಿನಾಂಕ 02–06–2009 ರಂದು ಹೊರಡಿಸಿರುವ ಕಛೇರಿಯ ಅಧಿಸೂಚನೆಯಲ್ಲಿರುವ ಇನ್ನುಳಿದ ಅಂಶಗಳು ಹಾಗೆಯೇ ಮುಂದುವರೆದಿರುತ್ತದೆ.

ಪಿ.ಆರ್. 495 ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವೃತ್ತ, ಶಿವಮೊಗ್ಗ.

## ಅರಣ್ಯ ಇಲಾಖೆ

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ.**

**ಸಂಖ್ಯೆ: ಎ2/ಬಿಯುಡಿ/ಇ.ಟೂ/ಸಿಆರ್– /09–10, ದಿನಾಂಕ: 24ನೇ ಜೂನ್ 2009**

**ಅಲ್ಪಾವಧಿ ಸಂಕ್ಷಿಪ್ತ ಟೆಂಡರು ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಶೆಡ್ಯೂಲ್ 'ಎ'ನಲ್ಲಿ ಸೂಚಿಸಿರುವ ಕಾಮಗಾರಿಗಳಿಗೆ ನಿಗದಿತ ನಮೂನೆಯಲ್ಲಿ ಮೊಹರು ಮಾಡಿದ ಶೇಖಡವಾರು ಟೆಂಡರ್‌ಗಳನ್ನು 2009–10 ನೇ ಸಾಲಿಗೆ ನೊಂದಾಯಿತ ಗುತ್ತಿಗೆದಾರರಿಂದ ಆಹ್ವಾನಿಸಲಾಗಿದೆ.

ಟೆಂಡರುಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ ಅಥವಾ ಅವರಿಂದ ಅಧಿಕಾರ ಹೊಂದಿದವರು ಈ ಕಛೇರಿಯಲ್ಲಿ ದಿನಾಂಕ : 15–07–2009 ರಂದು ಅಪರಾಹ್ನ 3–00 ರ ತನಕ ಸ್ವೀಕರಿಸುವರು. ಟೆಂಡರುಗಳನ್ನು ಗುತ್ತಿಗೆದಾರರುಗಳ ಸಮ್ಮುಖದಲ್ಲಿ ಸಾಧ್ಯವಾದರೆ ಅದೇ ದಿನ ತೆರೆಯಲಾಗುವುದು. ಒಂದು ವೇಳೆ ಮೇಲೆ ಹೇಳಿದ ದಿನಾಂಕದಂದು ಯಾವ ಗುತ್ತಿಗೆದಾರರೂ ಟೆಂಡರು ಹಾಕದಿದ್ದಲ್ಲಿ, ಇದೇ ಟೆಂಡರು ಪ್ರಕ್ರಿಯೆಯನ್ನು ಮುಂದುವರಿಸಿ, ಮರುಟೆಂಡರನ್ನು ದಿನಾಂಕ:22–07–2009 ಮತ್ತು 29–07–2009 ರಂದು ಅಪರಾಹ್ನ 3–00 ಗಂಟೆಯೊಳಗೆ ಕರೆಯಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಸದರಿ ದಿನಾಂಕದಂದೇ ಟೆಂಡರುದಾರರ ಸಮ್ಮುಖದಲ್ಲಿ ಟೆಂಡರು ತೆರೆಯಲಾಗುವುದು.

ಕೆಳಗೆ ನಮೂದಿಸಿದ ಕಾಮಗಾರಿಗಳಿಗೆ ಸಂಬಂಧಿಸಿದ ರಚನೆ, ವಿನ್ಯಾಸ, ಅಳತೆ, ಸಮಾಗ್ರಿ, ಗುಣಮಟ್ಟ, ಬಣ್ಣ, ನಮೂನೆ ರೇಖಾ ಚಿತ್ರ, ಮಾನದಂಡಗಳು ಇತರೆ ವಿವರಗಳ ಕುರಿತು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಯಿಂದ ಪಡೆಯಬಹುದಾಗಿದೆ. ಕೆಲಸದ ಪರಿಮಾಣವು ಅನುದಾನಕ್ಕೆ ಅನುಗುಣವಾಗಿ ಹೆಚ್ಚು ಅಥವಾ ಕಡಿಮೆಯಾಗಬಹುದು.

ಟೆಂಡರು ಫಾರಂಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ ರವರ ಕಛೇರಿಯಿಂದ ದಿನಾಂಕ : 14–07–2009 ರ ಸಂಜೆ 5–00 ಗಂಟೆಯ ತನಕ ಕೆಲಸದ ವೇಳೆಯಲ್ಲಿ ಟೆಂಡರು ಶುಲ್ಕ ರೂ.500–00 ಮತ್ತು ತೆರಿಗೆಯನ್ನು ಪಾವತಿಸಿ ಪಡೆಯಬಹುದು.

**ಷರತ್ತುಗಳು**

1. ಟೆಂಡರುದಾರರು ಕಾಮಗಾರಿಯ ಮುಂದೆ ನಮೂದಿಸಿದ ಠೇವಣಿ ಮೊಬಲಗನ್ನು ಡಿ.ಡಿ. ಮುಖಾಂತರ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಪದನಾಮದಲ್ಲಿ ಪ್ರತಿ ಕಾಮಗಾರಿಗೆ ಪ್ರತ್ಯೇಕವಾಗಿ ಪಡೆದು ಟೆಂಡರ್‌ನ ಜೊತೆ ಲಗತ್ತಿಸಬೇಕು.
2. ನಮೂದಿಸಿದ ಟೆಂಡರ್ ದರವು ಅರಣ್ಯ ಇಲಾಖೆಯ ಸಾಮಾನ್ಯ ದರಪಟ್ಟಿ ಮತ್ತು ಲೋಕೋಪಯೋಗಿ ಇಲಾಖೆಯ ಚಾಲ್ತಿ ವರ್ಷದಲ್ಲಿ ಮಂಜೂರಾಗಿರುವ ದರದ ಆಧಾರದ ಮೇಲೆ ಶೇಕಡವಾರು ನಮೂದಿಸಿರಬೇಕು.
3. ಅನುಸೂಚಿಯಲ್ಲಿನ ಕೆಲಸದ ಸ್ಥಳ ಮೊತ್ತ ಹಾಗೂ ಪರಿಮಾಣ ಅಂದಾಜಿನದಾಗಿದ್ದು, ಸಂದರ್ಭಾನುಸಾರ ಬದಲಾವಣೆಗೆ ಒಳಪಟ್ಟಿರುತ್ತದೆ ಮತ್ತು ಅಂತಿಮ ತೀರ್ಮಾನ ಉಪ ಅರಣ್ಯ ಸಂರಕ್ಷಣಾಧಿಕಾರಿಗಳದ್ದೇ ಆಗಿರುತ್ತದೆ.
4. ಈ ಹಿಂದೆ ಯಾವುದೇ ಇಲಾಖೆಗಳಲ್ಲಿ ಕೈಗೊಂಡ ಕಾಮಗಾರಿಗಳ ವಿವರ ಹಾಗೂ ತೃಪ್ತಿಕರವಾಗಿ ಕೆಲಸಗಳನ್ನು ಪೂರೈಸಿದ ಬಗ್ಗೆ ಇಲಾಖಾಧಿಕಾರಿಗಳ ದೃಢೀಕರಣ ಪತ್ರವನ್ನು ಟೆಂಡರಿಗೆ ಲಗತ್ತಿಸತಕ್ಕದ್ದು. ಸದ್ರಿ ಕಾಮಗಾರಿಗಳು ಟೆಂಡರು ಕಾಮಗಾರಿಗಳಾಗಿರತಕ್ಕದ್ದು. ಈ ಹಿಂದೆ ಮಾಡಿದ ಕಾಮಗಾರಿಗಳ ದೃಢೀಕರಣ ಪತ್ರ ಇಲ್ಲದ ಟೆಂಡರುಗಳನ್ನು ತಿರಸ್ಕರಿಸಲಾಗುವುದು. ಈಗಾಗಲೇ ಮಾಡಿದ ಕಾಮಗಾರಿಗಳು ಕಳಪೆ ಎಂದು ಈ ಕೆಳಗೆ ಸಹಿ ಮಾಡಿದವರಿಗೆ ಅಥವಾ ಅವರಿಂದ ಅಧಿಕಾರ ಪಡೆದವರಿಗಾಗಲಿ ಕಂಡು ಬಂದಲ್ಲಿ, ಸಫಲೀಕೃತ ಟೆಂಡರುದಾರರಿಗೆ ನೀಡಿದ ಗುತ್ತಿಗೆಯನ್ನು ಹಿಂದೆ ಪಡೆಯಲಾಗುವುದು.
5. ಸಂಬಂಧಿತ ಕ್ಷೇತ್ರದಲ್ಲಿ ಶಿಕ್ಷಿತರಾಗದೇ ಮತ್ತು ಅನುಭವಿಗಳಾಗದೇ ಇದ್ದವರಿಗೆ ಟೆಂಡರು ಕಾಮಗಾರಿಯನ್ನು ವಹಿಸಿಕೊಡುವುದನ್ನು ತಿರಸ್ಕರಿಸುವ ಹಕ್ಕು ಈ ಕೆಳ ಸಹಿದಾರರಿಗೆ ಇದೆ.
6. ಟೆಂಡರುದಾರರು ವಿಳಾಸ ದೃಢೀಕರಣಕ್ಕಾಗಿ ಆದಾಯ ತೆರಿಗೆ ಪಾನ್‌ಕಾರ್ಡ್ ಅಥವಾ ಚುನಾವಣಾ ಆಯೋಗ ನೀಡಿದ ಗುರುತಿನ ಚೀಟಿ ಅಥವಾ ವಾಹನ ಚಾಲನಾ ಪರವಾನಿಗೆಯ ಒಂದು ಪ್ರತಿಯನ್ನು ಲಗತ್ತಿಸತಕ್ಕದ್ದು.

ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಎ.ಕೆ. ಸಿಂಗ್**

ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ.

**ಕಾವೇರಿ ವನ್ಯಜೀವಿ ವಿಭಾಗ – ಕನಕಪುರ**

**ಕಾಮಗಾರಿಯ ಸಂಕ್ಷಿಪ್ತ ವಿವರ**

Schdule A

ಟೆಂಡರು ದಿನಾಂಕ: 15–07–2009.

| ಕ್ರ. ಸಂ. | ಕಾಮಗಾರಿಗಳ ವಿವರ | ಲೆಕ್ಕ ಶೀರ್ಷಿಕೆ | ಸ್ಥಳ | ಪರಿಮಾಣ (ಅಂದಾಜು) | ಕಾಮಗಾರಿ ಅಂದಾಜು ವೆಚ್ಚ (ಲಕ್ಷಗಳಲ್ಲಿ) | ಟೆಂಡರು ಜೊತೆ ಸಲ್ಲಿಸಬೇಕಾದ ಇ.ಎಂ.ಡಿ. ಶೇ.2.0 (ರೂ.ಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ನಿಗದಿಪಡಿಸಿದ ಕೊನೆಯ ದಿನಾಂಕ |
|---|---|---|---|---|---|---|---|
| 1 | 2 | 3 | 5 | 6 | 7 | 8 | 9 |
| 1. | ಲೇಡಿ ಬರ್ಡ ಬೀಟಲ್ (Lady bird Beetle) ಕಾನ್ಸೆಪ್ಟ್ ಟೆಂಟ್ ರಚನೆಗೆ ಚೌಕಟ್ಟು ರೂಪಿಸುವುದು ಮತ್ತು ಟೆಂಟ್ ಅಳವಡಿಸುವುದು. | ಪ್ರವಾಸೋದ್ಯಮ (ಕೇಂದ್ರ) | ಗೋಪಿನಾಥಂ | 10 ಸಂ | 11.50 | 23,000.00 | 30–09–2009 |

ಪಿ.ಆರ್. 496

ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ.

## ಲೋಕೋಪಯೋಗಿ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ

## ಟೆಂಡರ್ ಮುಂದೂಡಿಕೆ

**1. ಅಲ್ಪಾವಧಿ ಟೆಂಡರ್‌ಗಳಿಗಾಗಿ ಆಹ್ವಾನ (I.F.T) ಸಂಖ್ಯೆ: 06–1/2008–09 ದಿನಾಂಕ: 23ನೇ ಜೂನ್ 2009**

**2. ಅಲ್ಪಾವಧಿ ಟೆಂಡರ್‌ಗಳಿಗಾಗಿ ಆಹ್ವಾನ (I.F.T) ಸಂಖ್ಯೆ: 06/2008–09 ದಿನಾಂಕ: 27ನೇ ಮೇ 2009**

**ಭಾಗ – 1 ಟೆಂಡರುಗಳಿಗಾಗಿ ಅರ್ಜಿ ಆಹ್ವಾನ – ಕೆ.ಡಬ್ಲ್ಯೂ–1 ಮತ್ತು 2 ರಂತೆ**

ಈ ಅಧಿಸೂಚನೆಯಲ್ಲಿ ತಿಳಿಸಿದ ಕ್ರಮ ಸಂಖ್ಯೆ 1 ರಿಂದ 4 ರ ಕಾಮಗಾರಿಗಳಿಗಾಗಿ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಅರ್ಹ ಗುತ್ತಿಗೆದಾರಿಂದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಮೂಲಕ ಟೆಂಡರ್‌ಗಳನ್ನು ಆಹ್ವಾನಿಸಿದ್ದು, ಟೆಂಡರ್ ಡಾಕ್ಯೂಮೆಂಟ್‌ಗಳನ್ನು ಕರ್ನಾಟಕ ಸರ್ಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂದರೆ https://eproc.karnataka.gov.in ಮೂಲಕ ದಿನಾಂಕ: 21.07.2009 ರಿಂದ 28.07.2009 ರವರೆಗೆ ಪಡೆಯ ಬಹುದಾಗಿರುತ್ತದೆ. ಆಕ್ಷೇಪಣೆ–ಸಂದೇಹ ಮತ್ತು ವಿವರಣೆಗಳಿಗೆ ಟೆಂಡರ್, ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಲು ಕಡೆಯ ದಿನಾಂಕ, ತಾಂತ್ರಿಕ ಬಿಡ್‌ಗಳನ್ನು ತೆರೆಯುವ ಮತ್ತು ಆರ್ಥಿಕ ಬಿಡ್‌ನ್ನು ತೆರೆಯುವ ದಿನಾಂಕಗಳನ್ನು ಈ ಕೆಳಕಂಡಂತೆ ಮುಂದೂಡಲಾಗಿದೆ.

1. ಆಕ್ಷೇಪಣೆ–ಸಂದೇಹ ಮತ್ತು ವಿವರಣೆಗಳಿಗೆ ಕಡೆಯ ದಿನಾಂಕ: 22.07.2009 (ಸಂಜೆ 3.00 ಗಂಟೆಯವರೆಗೆ ಕಛೇರಿ ವೇಳೆಯಲ್ಲಿ)
2. ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಲು ಕಡೆಯ ದಿನಾಂಕ: 28.07.2009 (ಸಂಜೆ 4.00 ಗಂಟೆಯವರೆಗೆ)
3. ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: 31.07.2009 ಬೆಳಿಗ್ಗೆ 11.00 ಗಂಟೆಗೆ.
4. ಆರ್ಥಿಕ ಬಿಡ್‌ನ್ನು ತೆರೆಯುವ ದಿನಾಂಕ: 10.08.2009 ಬೆಳಿಗ್ಗೆ 11.00 ಗಂಟೆಗೆ

**ಸೂಚನೆ:** ಇತರೆ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ. ಸದರಿ ಟೆಂಡರ್ ಅಧಿಸೂಚನೆಯ ವಿವರಗಳನ್ನು ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಲು ಸಹಾ ಕೋರಿದೆ.

ಪಿ.ಆರ್. 500 ಕಾರ್ಯನಿರ್ವಾಹಕ ಇಂಜಿನಿಯರ್, ಚಿಕ್ಕಬಳ್ಳಾಪುರ ಲೋ.ಇ. ವಿಭಾಗ., ಚಿಕ್ಕಬಳ್ಳಾಪುರ.

## ಲೋಕೋಪಯೋಗಿ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ

## ಟೆಂಡರ್ ಮುಂದೂಡಿಕೆ

**1. ಅಲ್ಪಾವಧಿ ಟೆಂಡರ್‌ಗಳಿಗಾಗಿ ಆಹ್ವಾನ (I.F.T) ಸಂಖ್ಯೆ: 02–1/2008–09 ದಿನಾಂಕ: 23ನೇ ಜೂನ್ 2009**

**2. ಅಲ್ಪಾವಧಿ ಟೆಂಡರ್‌ಗಳಿಗಾಗಿ ಆಹ್ವಾನ (I.F.T) ಸಂಖ್ಯೆ: 02/2008–09 ದಿನಾಂಕ: 27ನೇ ಮೇ 2009**

**ಭಾಗ – 1 ಟೆಂಡರುಗಳಿಗಾಗಿ ಅರ್ಜಿ ಆಹ್ವಾನ – ಕೆ.ಡಬ್ಲ್ಯೂ–1 ಮತ್ತು 2 ರಂತೆ**

ಈ ಅಧಿಸೂಚನೆಯಲ್ಲಿ ತಿಳಿಸಿದ ಕ್ರಮ ಸಂಖ್ಯೆ 1 ರಿಂದ 70 ರ ಕಾಮಗಾರಿಗಳಿಗಾಗಿ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಅರ್ಹ ಗುತ್ತಿಗೆದಾರಿಂದ ಟೆಂಡರ್‌ಗಳನ್ನು ಆಹ್ವಾನಿಸಿದ್ದು, ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ, ಖಾಲಿ ಟೆಂಡರ್ ಫಾರಂಗಳನ್ನು ನೀಡುವ, ಟೆಂಡರ್‌ಗಳನ್ನು ಸ್ವೀಕರಿಸುವ, ತೆರೆಯುವ ಇತ್ಯಾದಿ ದಿನಾಂಕಗಳನ್ನು ಈ ಕೆಳಕಂಡಂತೆ ಮುಂದೂಡಲಾಗಿದೆ.

1. ಟೆಂಡರ್ ಫಾರಂಗಳಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 17.07.2009 (ಬೆಳಿಗ್ಗೆ – 11.00 ಗಂಟೆಯಿಂದ ಸಂಜೆ 5.00 ಗಂಟೆಯವರೆಗೆ)
2. ಖಾಲಿ ಟೆಂಡರ್ ಫಾರಂಗಳನ್ನು ನೀಡುವ ದಿನಾಂಕ: 22.07.2009 (ಬೆಳಗ್ಗೆ – 10.30 ಗಂಟೆಯಿಂದ ಸಂಜೆ 5.00 ಗಂಟೆಯವರೆಗೆ)
3. ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಲು ಕಡೆಯ ದಿನಾಂಕ: 25.07.2009 (ಬೆಳಗ್ಗೆ – 10.30 ಗಂಟೆಯಿಂದ ಸಂಜೆ 4.00 ಗಂಟೆಯವರೆಗೆ) ಟೆಂಡರ್‌ಗಳನ್ನು ದಿನಾಂಕ: 27.07.2009 ರಂದು ಬೆಳಿಗ್ಗೆ 11.00 ಗಂಟೆಗೆ ತೆರೆಯಲಾಗುವುದು.

**ಸೂಚನೆ:** ಇತರೆ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಸದರಿ ಟೆಂಡರ್ ಅಧಿಸೂಚನೆಯ ವಿವರಗಳನ್ನು ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಲು ಸಹಾ ಕೋರಿದೆ.

ಪಿ.ಆರ್. 501 ಕಾರ್ಯನಿರ್ವಾಹಕ ಇಂಜಿನಿಯರ್, ಚಿಕ್ಕಬಳ್ಳಾಪುರ ಲೋ.ಇ. ವಿಭಾಗ., ಚಿಕ್ಕಬಳ್ಳಾಪುರ.

**ಕಾವೇರಿ ನೀರಾವರಿ ನಿಗಮ ನಿಯಮಿತ**

**(ಕರ್ನಾಟಕ ಸರ್ಕಾರದ ಒಂದು ಉದ್ಯಮ)**

**ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ನಂ.2 ವರುಣಾ ನಾಲಾ ನಿರ್ಮಾಣ ವಿಭಾಗ, ಗೋಕುಲಂ 4ನೇ ಹಂತ, ಮೈಸೂರು – 570 020. ದೂರವಾಣಿ ಸಂಖ್ಯೆ: 0821–2515598.**

**ಗುತ್ತಿಗೆದಾರರ ಪೂರ್ವಭಾವಿ ಅರ್ಹತೆಯನ್ನು ತಿಳಿಯುವುದರ ಸಲುವಾಗಿ ಹೊರಡಿಸುತ್ತಿರುವ ಅಧಿಸೂಚನೆ**

**(ಮ್ಯಾನ್ಯುಯಲ್ ಕಂ ಇ ಟೆಂಡರಿಂಗ್ ಪದ್ಧತಿ)**

**ಟೆಂಡರ್ ಪ್ರಕಟಣೆ ಸಂಖ್ಯೆ:1/2009–10, ದಿನಾಂಕ: 19ನೇ ಜೂನ್ 2009.**

ಮೈಸೂರು ಜಿಲ್ಲೆಯ ಮೈಸೂರು ತಾಲ್ಲೂಕಿನಲ್ಲಿ ಡಿ.ಡಿ.ಅರಸು ನಾಲೆಯ ಸರಪಳಿ: 1.00ಕಿ.ಮೀ.ನಿಂದ 45.00ನೇ ಕಿ.ಮೀ.ವರೆಗೆ ಮೆಕ್ಯಾನಿಕಲ್ ಪೇವರ್ ಬಳಸಿ ಸಿ.ಸಿ.ಲೈನಿಂಗ್ ಮಾಡುವ ಕಾಮಗಾರಿಯನ್ನು ಕಾವೇರಿ ನೀರಾವರಿ ನಿಗಮದ ವತಿಯಿಂದ ಕೈಗೊಳ್ಳಲು ಉದ್ದೇಶಿಸಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಇವರ ಪರವಾಗಿ ಗುತ್ತಿಗೆದಾರರ ಪೂರ್ವಭಾವಿ ಅರ್ಹತೆಗಾಗಿ ರಾಜ್ಯ ಸರ್ಕಾರಿ/ಕೇಂದ್ರ ಸರ್ಕಾರ/ಸಾರ್ವಜನಿಕ ಸ್ವಾಮ್ಯದ ಸಂಸ್ಥೆಯಲ್ಲಿ ಸಿವಿಲ್ 1ನೇ ದರ್ಜೆಯಲ್ಲಿ ನೊಂದಾಯಿಸಲ್ಪಟ್ಟಿರುವ ಹಾಗೂ ಕಾವೇರಿ ನೀರಾವರಿ ನಿಗಮದಲ್ಲಿ ನೊಂದಾಯಿಸಿರುವ ಅರ್ಹತೆ ಮತ್ತು ಅನುಭವವುಳ್ಳ ಗುತ್ತಿಗೆದಾರರಿಂದ/ಸಂಸ್ಥೆಗಳಿಂದ ಕಂಪನಿಗಳಿಂದ ಮ್ಯಾನ್ಯೂಯಲ್ ಕಂ ಇ–ಟೆಂಡರಿಂಗ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಕಾವೇರಿ ನೀರಾವರಿ ನಿಗಮದಲ್ಲಿ ನೊಂದಾಯಿಸದೇ ಇರುವ ಗುತ್ತಿಗೆದಾರರು/ಸಂಸ್ಥೆಗಳು/ಕಂಪನಿಗಳು ಹಣಕಾಸಿನ ಬಿಡ್ ಸಲ್ಲಿಸುವ ಮುನ್ನ ಕಡ್ಡಾಯವಾಗಿ ನೊಂದಾಯಿಸಬೇಕು.

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಕಾಮಗಾರಿಯ ಅಂದಾಜು ಮೊತ್ತ ರೂ.ಲಕ್ಷಗಳಲ್ಲಿ |
|---|---|---|
| 1 | ಡಿ.ಡಿ.ಅರಸು ನಾಲೆಯ ಸರಪಳಿ:1.00 ಯಿಂದ 45.00ನೇ ಕಿ.ಮೀ ವರೆಗೆ (ಶಿಥಿಲಗೊಂಡಿರುವ ಭಾಗಗಳಲ್ಲಿ) ಪುನರ್ ವಸತಿ ಕಲ್ಪಿಸುವ ಕಾಮಗಾರಿ | 498.00 |

ಗುತ್ತಿಗೆದಾರರು ಈ ಕೆಳಕಂಡ ಕಛೇರಿಗಳಲ್ಲಿ ಟೆಂಡರ್ ಫಾರಂಗಳನ್ನು ಪಡೆಯಲು ಅರ್ಜಿ ಸಲ್ಲಿಸಬಹುದಾಗಿದೆ.

1. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಕಾಫಿ ಬೋರ್ಡ್ ಕಟ್ಟಡ, ಬೆಂಗಳೂರು.
2. ಮುಖ್ಯ ಇಂಜಿನಿಯರ್, ನೀರಾವರಿ(ದಕ್ಷಿಣ) ಕಾ.ನೀ.ನಿ.ನಿ., ಸಾರ್ವಜನಿಕ ಕಛೇರಿಗಳ ಕಟ್ಟಡ, ನ್ಯೂ ಸಯಾಜಿರಾವ್ ರಸ್ತೆ, ಮೈಸೂರು–570024.
3. ಅಧೀಕ್ಷಕ ಇಂಜಿನಿಯರ್, ಕಬಿನಿ ಮತ್ತು ವರುಣಾ ನಾಲಾ ವೃತ್ತ, ಕಾ.ನೀ.ನಿ.ನಿ., ಕಾವೇರಿ ಭವನ ಸಂಕೀರ್ಣ, ಗೋಕುಲಂ 4ನೇ ಹಂತ, ಮೈಸೂರು–570 020.
4. ಕಾರ್ಯಪಾಲಕ ಇಂಜಿನಿಯರ್, ನಂ.2 ವರುಣಾ ನಾಲಾ ನಿರ್ಮಾಣ ವಿಭಾಗ, ಕಾ.ನೀ.ನಿ.ನಿ., ಕಾವೇರಿ ಭವನ ಸಂಕೀರ್ಣ, ಗೋಕುಲಂ 4ನೇ ಹಂತ, ಮೈಸೂರು–570 020.

| | |
|---|---|
| ಪೂರ್ವಭಾವಿ ಟೆಂಡರ್ ಫಾರಂ ಬೆಲೆ : | ರೂ.15,000/– (ಹಿಂದಿರುಗಿಸಲಾಗುವುದಿಲ್ಲ) ಕಾರ್ಯಪಾಲಕ ಇಂಜಿನಿಯರ್, ನಂ.2 ವರುಣಾ ನಾಲಾ ನಿರ್ಮಾಣ ವಿಭಾಗ, ಮೈಸೂರು ಇವರ ಹೆಸರಿನಲ್ಲಿ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಮಾತ್ರ |
| ಖಾಲಿ ಟೆಂಡರ್ ಫಾರಂಗಳಿಗೆ ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ | 06–08–09 ರವರೆಗೆ |
| ಖಾಲಿ ಟೆಂಡರ್ ಫಾರಂಗಳನ್ನು ನೀಡುವ ಕೊನೆಯ ದಿನಾಂಕ: | 10–08–2009ರವರೆಗೆ |
| ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: | 17–08–2009ರ ಸಂಜೆ 4–30 ಘಂಟೆಯವರೆಗೆ. |

1. ಖಾಲಿ ಟೆಂಡರ್ ಫಾರಂಗಳನ್ನು ವೆಬ್ ಸೈಟ್ www.tenderwizard.com/CNNL ಮುಖಾಂತರ ಸಹಾ ಪಡೆಯಬಹುದಾಗಿರುತ್ತದೆ.
2. ಇ–ಟೆಂಡರಿಂಗ್ ನಲ್ಲಿ ಭಾಗವಹಿಸುವ ಗುತ್ತಿಗೆದಾರರು ನೊಂದಣಿ ಪುಸ್ತಕ, ಇ–ಮೇಲ್ ವಿಳಾಸ ಮತ್ತು ಗುರುತಿನ ಚೀಟಿ ಸಲ್ಲಿಸಬೇಕು.

ಭರ್ತಿ ಮಾಡಿದ ಪೂರ್ವಭಾವಿ ಅರ್ಹತಾ ಟೆಂಡರ್ ಫಾರಂಗಳನ್ನು ದ್ವಿ ಪ್ರತಿಯಲ್ಲಿ ಈ ಕೆಳಕಂಡ ಕಛೇರಿಗಳಲ್ಲಿ ಸಲ್ಲಿಸಬಹುದಾಗಿದೆ.

1. ಮುಖ್ಯ ಇಂಜಿನಿಯರ್, ನೀರಾವರಿ(ದಕ್ಷಿಣ) ಕಾ.ನೀ.ನಿ.ನಿ., ಸಾರ್ವಜನಿಕ ಕಛೇರಿಗಳ ಕಟ್ಟಡ, ನ್ಯೂ ಸಯಾಜಿರಾವ್ ರಸ್ತೆ, ಮೈಸೂರು–570024.
2. ಅಧೀಕ್ಷಕ ಇಂಜಿನಿಯರ್, ಕಬಿನಿ ಮತ್ತು ವರುಣಾ ನಾಲಾ ವೃತ್ತ, ಕಾ.ನೀ.ನಿ.ನಿ., ಕಾವೇರಿ ಭವನ ಸಂಕೀರ್ಣ, ಗೋಕುಲಂ 4ನೇ ಹಂತ, ಮೈಸೂರು–570 020.
3. ಕಾರ್ಯಪಾಲಕ ಇಂಜಿನಿಯರ್, ನಂ.2 ವರುಣಾ ನಾಲಾ ನಿರ್ಮಾಣ ವಿಭಾಗ, ಕಾ.ನೀ.ನಿ.ನಿ., ಕಾವೇರಿ ಭವನ ಸಂಕೀರ್ಣ, ಗೋಕುಲಂ 4ನೇ ಹಂತ, ಮೈಸೂರು–570 020.

ಪೂರ್ವಭಾವಿ ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಲಾಗಿರುವ ಕಾರ್ಯಪಾಲಕ ಇಂಜಿನಿಯರ್‌ರವರು ದಿನಾಂಕ: 17.8.2009ರ ಸಂಜೆ:5–00ಘಂಟೆಗೆ ತೆರೆಯಲಾಗುವುದು. ಅಥವಾ ಮುಂದೆ ಪ್ರಕಟಿಸುವ ಅನುಕೂಲಕರ ಕೆಲಸದ ದಿನದಂದು ತೆರೆಯಲಾಗುವುದು.

ಅರ್ಜಿದಾರರು ಪೂರ್ವಭಾವಿ ಅರ್ಹತಾ ಟೆಂಡರ್‌ಗೆ ಅರ್ಜಿ ಸಲ್ಲಿಸುವಾಗ ಈ ಕೆಳಕಂಡ ಮಾಹಿತಿಗಳನ್ನು ಒದಗಿಸುವುದು.

1. ಹೆಸರು, ವಿಳಾಸ, ದೂರವಾಣಿ ಸಂಖ್ಯೆ, ಫ್ಯಾಕ್ಸ್ ಸಂಖ್ಯೆ, ಇತ್ಯಾದಿ.
2. ಪಾಲುದಾರರ ಸಂಸ್ಥೆಯಾಗಿದ್ದಲ್ಲಿ ಸಂಸ್ಥೆಯ ಹೆಸರು/ಮಾಲೀಕತ್ವದ ಹೆಸರು, ವಿಳಾಸ ಮತ್ತು ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರ ಹೆಸರು, ನೊಂದಾಯಿತ ಕಛೇರಿ ವಿಳಾಸ ಹಾಗೂ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಪ್ರತಿ (ಲಿಮಿಟೆಡ್ ಕಂಪನಿಯಾದರೆ)
3. ಗುತ್ತಿಗೆದಾರರ ಗುತ್ತಿಗೆ ನೊಂದಣಿ ಪುಸ್ತಕ.

**ಸಾಮಾನ್ಯ ಮಾಹಿತಿಗಳು:**

1. ಗುತ್ತಿಗೆದಾರರು ಇ–ಟೆಂಡರಿಂಗ್ ಅಥವಾ ಮ್ಯಾನ್ಯುಯಲ್ ಟೆಂಡರಿಂಗ್ ಪದ್ಧತಿಯಲ್ಲಿ ಭಾಗವಹಿಸುವ ಬಗ್ಗೆ, ಪೂರ್ವಭಾವಿ ಟೆಂಡರ್ ಫಾರಂಗೆ ಅರ್ಜಿ ಸಲ್ಲಿಸುವ ಸಮಯದಲ್ಲಿ ತಿಳಿಸತಕ್ಕದ್ದು.
2. ಯಾವುದೇ ಕಾರಣ ನೀಡದೆ, ಯಾವುದೇ ಅಥವಾ ಎಲ್ಲಾ ಪೂರ್ವಭಾವಿ ಅರ್ಹತೆ ಟೆಂಡರ್‌ಗಳನ್ನು ತಿರಸ್ಕರಿಸುವ ಹಕ್ಕನ್ನು ಕಾವೇರಿ ನೀರಾವರಿ ನಿಗಮಕ್ಕೆ ಕಾಯ್ದಿರಿಸಲಾಗಿದೆ.

**ಪೂರ್ವಭಾವಿ ಅರ್ಹತೆಗಳು :–**

1) ಪೂರ್ವಭಾವಿ ಅರ್ಹತೆಗಳು, ಪೂರ್ವಭಾವಿ ಟೆಂಡರ್ ಡಾಕ್ಯುಮೆಂಟ್‌ನಲ್ಲಿ ತಿಳಿಸಿರುವ ನಿಬಂಧನೆಗಳಿಗೆ ಒಳಪಟ್ಟಂತೆ ಇರತಕ್ಕದ್ದು.
2) ಗುತ್ತಿಗೆದಾರರ ಪೂರ್ವಭಾವಿ ಅರ್ಹತೆಯನ್ನು ಅವರು ಸಲ್ಲಿಸುವ ಈ ಕೆಳಕಂಡ ಮಾಹಿತಿಗಳ ಅನುಸಾರ ಪರಿಗಣಿಸಲಾಗುವುದು.
   (ಎ) ಇದೇ ಮಾದರಿ ಕಾಂಕ್ರೀಟ್ / ಲೈನಿಂಗ್ ಕಾಮಗಾರಿಗಳಲ್ಲಿ ಅನುಭವ ಹಾಗೂ ಪರಿಣಿತಿ.
   (ಬಿ) ಯಂತ್ರೋಪಕರಣ ಮತ್ತು ನುರಿತ ತಾಂತ್ರಿಕ ಸಿಬ್ಬಂದಿಗಳ ಸಾಮರ್ಥ್ಯ.
   (ಸಿ) ಹಣಕಾಸಿನ ಸ್ಥಿತಿ ಮತ್ತು ಅರ್ಹತೆ.
   (ಡಿ) ಅವಶ್ಯಕವಿರುವ ಇತರೆ ದಾಖಲಾತಿಗಳು.

ಹೆಚ್ಚುವರಿ ಮಾಹಿತಿಗಾಗಿ ಕಾರ್ಯಪಾಲಕ ಇಂಜಿನಿಯರ್, ನಂ.2 ವರುಣಾ ನಾಲಾ ನಿರ್ಮಾಣ ವಿಭಾಗ, ಮೈಸೂರು ಇವರಿಂದ ಕಛೇರಿ ವೇಳೆಯಲ್ಲಿ ಎಲ್ಲಾ ಕೆಲಸದ ದಿನಗಳಲ್ಲಿ ಪಡೆಯಬಹುದಾಗಿದೆ. ಮೇಲ್ಕಂಡ ಯಾವುದೇ ದಿನವು ಸಾರ್ವಜನಿಕ ರಜೆ ಎಂದು ಘೋಷಿಸಲ್ಪಟ್ಟಲ್ಲಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದು.

ಕಾರ್ಯಪಾಲಕ ಇಂಜಿನಿಯರ್,
ಪಿ.ಆರ್. 502 ನಂ.2, ವರುಣಾ ನಾಲಾ ನಿರ್ಮಾಣ ವಿಭಾಗ, ಮೈಸೂರು.

**FORM - IV**
**(See Rule 12)**
**NOTICE**

It is hereby notified that the undersigned has changed his/her name from **K. ANKAPPA** to **K. HARSHA KUMAR**

P.D. 101 **K. ANKAPPA**

**ZOO AUTHORITY OF KARNATAKA**

**OFFICE OF THE EXECUTIVE DIRECTOR, BANNERGHATTA BIOLOGICAL PARK, BANGALORE**

**Ph No: 7828540, 7828300 Fax: 7828400 E mail: bannerghattazoo@gmail.com**

**SHORT TERM TENDER NOTIFICATION**

**No.A4-BBP-Feeding-CR- /2009-10, Date: 15th June 2009**

Sealed tenders are invited from the suppliers who were registered in this office for the works mentioned below for the year 2009-10.

**SCHEDULE**

| Unit No | Particulars of Works | Approximate cost of tender (Rs. In lakhs) | EMD (Rs. In lakhs) |
|---|---|---|---|
| 1 | Supply of food grains, pulses, cattle feed etc to the zoo | 12.00 | 1.20 |
| 2 | Supply of vegetables, fruits, green grass etc., to the zoo | 14.00 | 1.40 |
| 3 | Supply of fish to the zoo | 3.50 | 0.35 |
| 4 | Supply of grass, cattle feed to Herbivore Safari | 13.00 | 1.30 |
| 5 | Supply of Food grains, Fruits, Vegetables etc to Bear Safari | 3.50 | 0.35 |
| 6 | Supply of chicken, eggs & other items to various facilities | 9.00 | 0.90 |

**CONDITIONS**

1. Issue of tender forms from 16-07-2009 to 19-07-2009 on payment of Rs.563/- per form (including tax) separately for each unit.
2. Submission of Tenders on 20-07-2009 up to 3:00 PM and Opening of Tenders at 4:00PM
3. Other detailed conditions can be had from the above office.

Executive Director,
Bannerghatta Biological Park, Bangalore

**ಕರ್ನಾಟಕ ಮೃಗಾಲಯ ಪ್ರಾಧಿಕಾರ**

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು – 83.**

**ದೂರವಾಣಿ: 7828540, 7828300, ಫ್ಯಾಕ್ಸ್: 7828400, E mail: bannerghattazoo@gmail.com**

**ಅಲ್ಪಾವಧಿ ಟೆಂಡರು ಪ್ರಕಟಣೆ**

**ಸಂಖ್ಯೆ: ಎ4–ಬಬಪಾ–ಫೀಡ್–ಸಿಆರ್–/2009–2010, ದಿನಾಂಕ: 15ನೇ ಜೂನ್ 2009**

ಕೆಳಗೆ ನಮೂದಿಸಿರುವಂತೆ ವಿವಿಧ ಸಾಮಗ್ರಿಗಳಿಗೆ ಈ ಕಛೇರಿಯಲ್ಲಿ ನೊಂದಾಯಿಸಿರುವ ಸರಬರಾಜುದಾರರಿಂದ 2009–10ನೇ ಸಾಲಿಗೆ ಟೆಂಡರ್ ಕರೆಯಲಾಗಿದೆ.

**ಷೆಡ್ಯೂಲ್**

| ಯೂನಿಟ್ ಸಂಖ್ಯೆ | ವಿವರಗಳು | ಟೆಂಡರಿನ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ ಹಣ (ರೂ. ಲಕ್ಷಗಳಲ್ಲಿ) |
|---|---|---|---|
| 1 | ಮೃಗಾಲಯಕ್ಕೆ ದವಸ ಧಾನ್ಯ, ದ್ವಿದಳ ಧಾನ್ಯ, ಪಶು ಆಹಾರ ಇತ್ಯಾದಿ ಸರಬರಾಜು ಮಾಡುವುದು | 12.00 | 1.20 |
| 2 | ಮೃಗಾಲಯಕ್ಕೆ ತರಕಾರಿ, ಹಣ್ಣು, ಹಸಿರು ಹುಲ್ಲು ಇತ್ಯಾದಿ ಸರಬರಾಜು ಮಾಡುವುದು | 14.00 | 1.40 |
| 3 | ಮೃಗಾಲಯಕ್ಕೆ ಮೀನು ಸರಬರಾಜು ಮಾಡುವುದು | 3.50 | 0.35 |
| 4 | ಸಸ್ಯಹಾರಿ ಸಫಾರಿಗೆ ಹಸಿರು ಹುಲ್ಲು, ಪಶು ಆಹಾರ ಇತ್ಯಾದಿ ಸರಬರಾಜು ಮಾಡುವುದು | 13.00 | 1.30 |

**ಕರ್ನಾಟಕ ಲೋಕ ಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–560 001.**

**ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ 1 ಆರ್‌ಟಿಬಿ–1/2009, ದಿನಾಂಕ: 3ನೇ ಜುಲೈ 2009**

1. ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳು 2006 ಹಾಗೂ ಕಾಲಕಾಲಕ್ಕೆ ತಿದ್ದುಪಡಿಯಾದ ನಿಯಮಗಳಡಿಯಲ್ಲಿ ಕೆಳಕಂಡ ತಾಂತ್ರಿಕೇತರ ಹುದ್ದೆಗಳನ್ನು

| ಇಲಾಖೆಯ ಹೆಸರು ಮತ್ತು ಪದನಾಮ | ಹುದ್ದೆಗಳ ಸಂಖ್ಯೆ |
|---|---|
| **ಗ್ರೂಪ್– ' ಬಿ ' ಹುದ್ದೆಗಳು** | |
| 1) ತಾಂತ್ರಿಕ ಶಿಕ್ಷಣ ಇಲಾಖೆಯ ಸರ್ಕಾರಿ ಕಿರಿಯ ತಾಂತ್ರಿಕ ಶಾಲೆಯಲ್ಲಿ ವಿಜ್ಞಾನ ಉಪನ್ಯಾಸಕರು | 02 |
| **ಗ್ರೂಪ್– ' ಸಿ ' ಹುದ್ದೆಗಳು** | |
| 2) ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಆಶ್ರಮ ಶಾಲಾ ಶಿಕ್ಷಕರು | 34 |
| 3) ಅಡ್ವೋಕೇಟ್ ಜನರಲ್‌ರವರ ಕಛೇರಿ, ಬೆಂಗಳೂರು, ಇಲ್ಲಿ ಗ್ರಂಥಾಲಯ ಸಹಾಯಕರು | 02 |
| 4) ಸಮಾಜ ಕಲ್ಯಾಣ ಇಲಾಖೆಯಲ್ಲಿ ಸೀನಿಯರ್ ವಾರ್ಡನ್ (ಬಾಲಕ) (ಬಾಲಕಿಯರು) | 27 |
| 5) ಸಮಾಜ ಕಲ್ಯಾಣ ಇಲಾಖೆಯಲ್ಲಿ ವಾರ್ಡನ್ (ಬಾಲಕ) (ಬಾಲಕಿಯರು) | 250 |
| ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ:<br>6) ನಿಲಯ ಮೇಲ್ವಿಚಾರಕರು (ಪುರುಷ) | 234 |
| 7) ನಿಲಯ ಮೇಲ್ವಿಚಾರಕರು (ಮಹಿಳೆ) | 103 |
| 8) ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ನಿಲಯ ವಾರ್ಡನ್ (ಬಾಲಕರು) (ಬಾಲಕಿಯರು) | 53 |
| 9) ನಗರಾಭಿವೃದ್ಧಿ ಇಲಾಖೆಯಲ್ಲಿ ಮುಖ್ಯಾಧಿಕಾರಿ ಶ್ರೇಣಿ–II (ಕೆ.ಎಂ.ಎ.ಎಸ್) ವೃಂದದ ಹುದ್ದೆಗಳು | 23 |
| 10) ಆಡಳಿತ ತರಬೇತಿ ಸಂಸ್ಥೆ (ಮೈಸೂರು) ಯಲ್ಲಿ ಗ್ರಂಥಾಲಯ ಸಹಾಯಕರ ಹುದ್ದೆ | 01 |

ಮತ್ತು ನಗರ ಯೋಜನೆ ಇಲಾಖೆ ಸೇವೆಗಳು (ನೇಮಕಾತಿ) ನಿಯಮಗಳು 1996 ರನ್ವಯ ಈ ಕೆಳಕಂಡ ಹುದ್ದೆಗಳನ್ನು ಭರ್ತಿ ಮಾಡಲು **ON LINE ಮೂಲಕ** ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ:–

| | |
|---|---|
| **ಗ್ರೂಪ್– ' ಎ ' ಹುದ್ದೆಗಳು** | |
| 11) ನಗರ ಯೋಜನಾ ಇಲಾಖೆಯಲ್ಲಿ ನಗರ ಯೋಜನಾ ಸಹಾಯಕ ನಿರ್ದೇಶಕರು | 18 |

**2.** ಅಭ್ಯರ್ಥಿಗಳು **ON LINE ಮೂಲಕ ಅರ್ಜಿಗಳನ್ನು ಭರ್ತಿ ಮಾಡಬೇಕು. ಈ ಬಗ್ಗೆ ಸೂಚನೆಗಳನ್ನು ಆಯೋಗದ ವೆಬ್ ಸೈಟ್ "http://kpsc.kar.nic.in/ON LINE APPLICATION" ನಲ್ಲಿ ಬಿತ್ತರಿಸಲಾಗಿದೆ.** ನಿಗದಿಪಡಿಸಿದ ಶುಲ್ಕವನ್ನು ಕೆಳಗೆ ನಮೂದಿಸಿರುವ ಅಪೆಕ್ಸ್ / ಡಿ.ಸಿ.ಸಿ. ಬ್ಯಾಂಕ್‌ಗಳಲ್ಲಿ ಪಾವತಿಸತಕ್ಕದ್ದು. **ಶುಲ್ಕ ಪಾವತಿ ಮಾಡಿದ ವಿವರವನ್ನು ಅರ್ಜಿಯಲ್ಲಿ ನಮೂದಿಸತಕ್ಕದ್ದು. ON LINE ಮೂಲಕ ಅರ್ಜಿಗಳನ್ನು ಭರ್ತಿ ಮಾಡಲು ಕೊನೆಯ ದಿನಾಂಕ 05–08–2009 ಸಂಜೆ 5:30 ಗಂಟೆ ಆಗಿರುತ್ತದೆ.**

**ಟಿಪ್ಪಣಿ:** ಅನುಸೂಚಿಯಲ್ಲಿ ತಿಳಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭದಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚಿನ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಇಚ್ಛಿಸಿದ್ದಲ್ಲಿ, ಅಂತಹ ಅಭ್ಯರ್ಥಿಗಳು ಪ್ರತಿ ಹುದ್ದೆಗೆ ಪ್ರತ್ಯೇಕವಾಗಿ ಅರ್ಜಿಸಿ ಶುಲ್ಕವನ್ನು ಪಾವತಿಸತಕ್ಕದ್ದು.

**3. ಶುಲ್ಕ:** ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ **ರೂ. 300/–** ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಅಂಗವಿಕಲರು ಹಾಗೂ ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಶುಲ್ಕದಿಂದ ವಿನಾಯಿತಿ ಇದೆ. ಆದರೆ ಸಂದರ್ಶನದಲ್ಲಿ / ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಅಂಕಗಳ ಪೂರೈಕೆಗಾಗಿ ಶುಲ್ಕ ರೂ: 100/–ನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

**3.1** ಶುಲ್ಕವನ್ನು ಕೆಳಕಂಡ ಅಪೆಕ್ಸ್ / ಡಿ.ಸಿ.ಸಿ. ಬ್ಯಾಂಕ್‌ಗಳಲ್ಲಿ **ದಿನಾಂಕ 06–07–2009** ರಿಂದ ಪಾವತಿಸಿ ಅರ್ಜಿಗಳನ್ನು **ON LINE ಮೂಲಕ** ಭರ್ತಿ ಮಾಡಬಹುದು. ಅರ್ಜಿ ನಮೂನೆಯಲ್ಲಿ ನಿಗದಿತ ಸ್ಥಳದಲ್ಲಿ ಶುಲ್ಕ ಪಾವತಿಯ ವಿವರವನ್ನು ಅಂದರೆ ಬ್ಯಾಂಕಿನ ಹೆಸರು, ರಸೀದಿ ಸಂಖ್ಯೆ ಹಾಗೂ ಮೊತ್ತವನ್ನು ನಮೂದಿಸತಕ್ಕದ್ದು.

**ಬೆಂಗಳೂರು ನಗರದ ಕೆಳಕಂಡ ಅಪೆಕ್ಸ್ ಬ್ಯಾಂಕ್ ಶಾಖೆಗಳು:–**

| ಕ್ರಮ ಸಂಖ್ಯೆ | ಬ್ಯಾಂಕಿನ ಹೆಸರು | ಕೋಡ್ ಸಂ. | ಕ್ರಮ ಸಂಖ್ಯೆ | ಬ್ಯಾಂಕಿನ ಹೆಸರು | ಕೋಡ್ ಸಂ. |
|---|---|---|---|---|---|
| 1 | ಅಶೋಕ ಪಿಲ್ಲರ್ ಬ್ರಾಂಚ್, ನಂ. 1/7, 1ನೇ ಬ್ಲಾಕ್, ಜಯನಗರ, ಬೆಂಗಳೂರು–560011. | **PASP** | 2 | ಬನಶಂಕರಿ ಬ್ರಾಂಚ್, 108/13, 50 ಅಡಿ ರಸ್ತೆ, 2ನೇ ಬ್ಲಾಕ್, ಬನಶಂಕರಿ 1ನೇ ಹಂತ, ಬೆಂಗಳೂರು–50 | **PBNS** |

| ಕ್ರಮ ಸಂಖ್ಯೆ | ಬ್ಯಾಂಕಿನ ಹೆಸರು | ಕೋಡ್ ಸಂ. | ಕ್ರಮ ಸಂಖ್ಯೆ | ಬ್ಯಾಂಕಿನ ಹೆಸರು | ಕೋಡ್ ಸಂ. |
|---|---|---|---|---|---|
| 3 | ಬಸವೇಶ್ವರ ನಗರ ಬ್ರಾಂಚ್, ನಂ.1, 1ನೇ ಮೈನ್, 3ನೇ ಹಂತ, ಬಸವೇಶ್ವರ ನಗರ, ಬೆಂಗಳೂರು–560079. | **PBWN** | 4 | ಚಂದ್ರ ಲೇಔಟ್ ಬ್ರಾಂಚ್, ನಂ.32, 8ನೇ ಕ್ರಾಸ್, ಚಂದ್ರ ಲೇಔಟ್, ಬೆಂಗಳೂರು–560040. | **PCHL** |
| 5 | ಗಾಂಧಿನಗರ ಬ್ರಾಂಚ್, ಜನತಾ ಬಜಾರ್ ಬಿಲ್ಡಿಂಗ್, ಗಾಂಧಿನಗರ, ಬೆಂಗಳೂರು–560009. | **PGNR** | 6 | ಗಂಗಾನಗರ ಬ್ರಾಂಚ್, ನಂ.18/2, 5ನೇ ಮೈನ್ ರೋಡ್, ಗಂಗೇನಹಳ್ಳಿ ಲೇಔಟ್, ಬೆಂಗಳೂರು–32. | **PMRP** |
| 7 | ಗಿರಿನಗರ ಬ್ರಾಂಚ್, 404, 80 ಅಡಿ ರಸ್ತೆ, ಗಿರಿನಗರ, ಬೆಂಗಳೂರು–560085. | **PGRN** | 8 | ಗೋಕುಲ ಬ್ರಾಂಚ್, ನಂ.29, ಎಂ.ಎಸ್.ರಾಮಯ್ಯ ರೋಡ್, ಮತ್ತೀಕೆರೆ, ಬೆಂಗಳೂರು–560054. | **PGKL** |
| 9 | ಪ್ರಧಾನ ಕಛೇರಿ, ನಂ.1, ಉತ್ತುಂಗ, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು–18 | **PSER** | 10 | ಹೆಚ್.ಎಸ್.ಆರ್.ಆಗರ ಬ್ರಾಂಚ್, ನಂ,.259, ರಿಂಗ್ ರೋಡ್, ಹೆಚ್.ಎಸ್.ಆರ್.ಲೇಔಟ್, ಅಗರ ವಿಲೇಜ್, ಬೆಂಗಳೂರು–560034. | **PAGR** |
| 11 | ಇಂದಿರಾನಗರ ಬ್ರಾಂಚ್, 310, 100 ಅಡಿ ರಸ್ತೆ, ಇಂದಿರಾನಗರ, 1ನೇ ಹಂತ, ಬೆಂಗಳೂರು–560038. | **PINR** | 12 | ಜಯನಗರ ಮಾರ್ಕೆಟ್ ಕಾಂಪ್ಲೆಕ್ಸ್, 4ನೇ ಬ್ಲಾಕ್, ಜಯನಗರ, ಬೆಂಗಳೂರು–560011. | **PJMC** |
| 13 | ಜಯನಗರ 9ನೇ ಬ್ಲಾಕ್ ಬ್ರಾಂಚ್, 487/109, ಈಸ್ಟ್ ಎಂಡ್ ರಸ್ತೆ, 9ನೇ ಬ್ಲಾಕ್, ಜಯನಗರ, ಬೆಂಗಳೂರು–560069 | **PJIX** | 14 | ಜೆ.ಪಿ.ನಗರ ಬ್ರಾಂಚ್, ನಂ.128/117, 2ನೇ ಫೇಸ್, ಜೆ.ಪಿ.ನಗರ, ಬೆಂಗಳೂರು–560078. | **PJPN** |
| 15 | ಶಿವಾಜಿನಗರ ಬ್ರಾಂಚ್, ನಂ.47/1, ಸೆಂಟ್ರಲ್. ಸ್ಕ್ವೆರ್ ಸೆಂಟ್ರಲ್ ಸ್ಟ್ರೀಟ್, ಸಂಗೀತಾ ಥಿಯೇಟರ್ ಎದುರು, ಶಿವಾಜಿನಗರ, ಬೆಂಗಳೂರು–560001. | **PKSB** | 16 | ಕೆಂಗೇರಿ ಸ್ಯಾಟಿಲೇಟ್ ಟೌನ್ ಬ್ರಾಂಚ್, ನಂ.867, 1ನೇ ಮೈನ್, 6ನೇ ಕ್ರಾಸ್, ಕೆಂಗೇರಿ ಸ್ಯಾಟಿಲೇಟ್ ಟೌನ್, ಬೆಂಗಳೂರು–560060. | **PKST** |
| 17 | ಕೋರಮಂಗಲ ಬ್ರಾಂಚ್,120/ಎ, ಕೆ.ಹೆಚ್.ಬಿ. ಲೇಔಟ್, ಕೋರಮಂಗಲ, ಬೆಂಗಳೂರು–560095 | **PKMG** | 18 | ಲಕ್ಕಸಂದ್ರ ಬ್ರಾಂಚ್, 259/1, 13ನೇ ಕ್ರಾಸ್, ವಿಲ್ಸನ್ ಗಾರ್ಡನ್, ಹೊಸೂರು ಮೈನ್ ರೋಡ್, ಬೆಂಗಳೂರು–560027. | **PLKS** |
| 19 | ಲೆಜಿಸ್ಲೇಟರ್ಸ್ ಹೋಮ್ ಬ್ರಾಂಚ್, ಲೆಜಿಸ್ಲೇಟರ್ಸ್ ಹೋಮ್ ಬಿಲ್ಡಿಂಗ್, ಬೆಂಗಳೂರು–560001. | **PLHE** | 20 | ಮಾಗಡಿ ರೋಡ್ ಬ್ರಾಂಚ್, 70, 11ನೇ ಕ್ರಾಸ್, ಮಾಗಡಿ ರೋಡ್, ಬೆಂಗಳೂರು–560023. | **PMGD** |
| 21 | ಮಹಾಲಕ್ಷ್ಮಿಪುರಂ ಬ್ರಾಂಚ್, 117, 2ನೇ ಸ್ಟೇಜ್ ವೆಸ್ಟ್ ಆಫ್ ಕಾರ್ಡ್ ರೋಡ್, ಬೆಂಗಳೂರು–560086. | **PWCR** | 22 | ಎಂ.ಎಸ್.ಬಿಲ್ಡಿಂಗ್ ಬ್ರಾಂಚ್, ವಿಧಾನ ವೀಧಿ, ಬೆಂಗಳೂರು–560001 | **PMSB** |
| 23 | ಪದ್ಮನಾಭ ನಗರ ಬ್ರಾಂಚ್, ಕೋ–ಆಪರೇಟಿವ್ ಟ್ರೇನಿಂಗ್ ಕಾಲೇಜ್ ಪ್ರಿಮಿಸೆಸ್, ಪದ್ಮನಾಭನಗರ, ಬೆಂಗಳೂರು–560070. | **PPNN** | 24 | ಪಬ್ಲಿಕ್ ಯುಟಿಲಿಟಿ ಬಿಲ್ಡಿಂಗ್ ಬ್ರಾಂಚ್, ಪಬ್ಲಿಕ್ ಯುಟಿಲಿಟಿ ಬಿಲ್ಡಿಂಗ್, ಎಂ.ಜಿ. ರೋಡ್, ಬೆಂಗಳೂರು–560001. | **PPUB** |
| 25 | ರಾಜಾಜಿನಗರ ಬ್ರಾಂಚ್, 491, 64ನೇ ಕ್ರಾಸ್, 5ನೇ ಬ್ಲಾಕ್, ಭಾಷ್ಯಂ ಸರ್ಕಲ್ ಹತ್ತಿರ, ರಾಜಾಜಿನಗರ, ಬೆಂಗಳೂರು–560010 | **PRJN** | 26 | ಆರ್.ಪಿ.ಸಿ.ಲೇಔಟ್ ಬ್ರಾಂಚ್, 199, 9ನೇ ಬಿ ಮೈನ್ ರೋಡ್, ಪೈಪ್‌ಲೈನ್ ರೋಡ್, ವಿಜಯನಗರ, ಬೆಂಗಳೂರು–560040. | **PRPC** |

| ಕ್ರಮ ಸಂಖ್ಯೆ | ಬ್ಯಾಂಕಿನ ಹೆಸರು | ಕೋಡ್ ಸಂ. | ಕ್ರಮ ಸಂಖ್ಯೆ | ಬ್ಯಾಂಕಿನ ಹೆಸರು | ಕೋಡ್ ಸಂ. |
|---|---|---|---|---|---|
| 27 | ಆರ್‌ಟಿ ನಗರ ಬ್ರಾಂಚ್, 19/4 ಮತ್ತು 3, ದಿಣ್ಣೂರ್ ಮುಖ್ಯ ರಸ್ತೆ, ಆರ್‌ಟಿ ನಗರ, ಬೆಂಗಳೂರು–560032 | **PRND** | 28 | ವಿಧಾನ ಸೌಧ ಬ್ರಾಂಚ್, ಡಾ: ಅಂಬೇಡ್ಕರ್ ವೀಧಿ, ವಿಧಾನ ಸೌಧ, ಬೆಂಗಳೂರು–1. | **PVID** |
| 29 | ವಿಜಯನಗರ ಬ್ರಾಂಚ್, ಎಸಿ–17, 1ನೇ ಮೈನ್, ವಿಜಯನಗರ, ಬೆಂಗಳೂರು–40. | **PVIJ** | 30 | ವಿವೇಕಾನಂದ ಕಾಲೇಜ್ ಎಕ್ಸ್‌ಟೆನ್ಷನ್ ಕೌಂಟರ್, ವಿವೇಕಾನಂದ ಕಾಲೇಜ್ ಕ್ಯಾಂಪಸ್, ಡಾ: ರಾಜ್ ಕುಮಾರ್ ರೋಡ್, ರಾಜಾಜಿನಗರ, ಬೆಂಗಳೂರು–560010. | **PECB** |
| 31 | ವೈಯ್ಯಾಳಿಕಾವಲ್ ಬ್ರಾಂಚ್, ನಂ.29, ಅನುಗ್ರಹ ಕಾಂಪ್ಲೆಕ್ಸ್, 12ನೇ ಕ್ರಾಸ್, ಸುಧೀಂದ್ರ ನಗರ, ಮಲ್ಲೇಶ್ವರಂ, ಗುಟ್ಟಹಳ್ಳಿ ಮೈನ್ ರೋಡ್, ಬೆಂಗಳೂರು–560003. | **PVKL** | | | |

**ಕೆಳಕಂಡ ಡಿ.ಸಿ.ಸಿ. ಬ್ಯಾಂಕ್‌ಗಳು**

| | | | | | |
|---|---|---|---|---|---|
| 32 | ಬಾಗಲಕೋಟೆ ಡಿ.ಸಿ.ಸಿ.ಬ್ಯಾಂಕ್, ಹೆಡ್ ಆಫೀಸ್ ಬ್ರಾಂಚ್, ಬಾಗಲಕೋಟೆ –587101. | **PBGHO** | 33 | ಬೆಳಗಾಂ ಡಿ.ಸಿ.ಸಿ.ಬ್ಯಾಂಕ್ ಲಿಮಿಟೆಡ್, ಸೆಂಟ್ರಲ್ ಬಸ್ ಸ್ಟಾಂಡ್ ಹತ್ತಿರ, ಬೆಳಗಾವಿ–590016. | **PBLHO** |
| 34 | ಬೆಳಗಾಂ ಡಿ.ಸಿ.ಸಿ.ಬ್ಯಾಂಕ್ ಲಿಮಿಟೆಡ್, ಚಿಕ್ಕೋಡಿ ಬ್ರಾಂಚ್, ಚಿಕ್ಕೋಡಿ–591201. | **PBLCH** | 35 | ಬಳ್ಳಾರಿ ಡಿ.ಸಿ.ಸಿ.ಬ್ರಾಂಚ್, ಮೈನ್ ಬ್ರಾಂಚ್, ಬೆಂಗಳೂರು ರೋಡ್, ಬಳ್ಳಾರಿ–583101. | **PBYBY** |
| 36 | ಬಳ್ಳಾರಿ ಡಿ.ಸಿ.ಸಿ.ಬ್ಯಾಂಕ್ ಲಿಮಿಟೆಡ್, ಹೆಡ್ ಆಫೀಸ್, ಟೌನ್ ಪೊಲೀಸ್ ಸ್ಟೇಷನ್ ಎದುರು, ಹೊಸಪೇಟೆ–583201. | **PBYHO** | 37 | ಬೀದರ್ ಡಿ.ಸಿ.ಸಿ.ಬ್ಯಾಂಕ್ ಲಿಮಿಟೆಡ್, ಬಸವೇಶ್ವರ್ ಚೌಕ್, ಬೀದರ್ | **PBDHO** |
| 38 | ಬಿಜಾಪುರ ಡಿ.ಸಿ.ಸಿ.ಬ್ಯಾಂಕ್ ಲಿಮಿಟೆಡ್ ಹೆಡ್ ಆಫೀಸ್, ಬಂಜಾರ್ ಕ್ರಾಸ್, ಕೆ.ಸಿ.ನಗರ, ಬಿಜಾಪುರ. | **PBJHO** | 39 | ಮೈಸೂರು ಡಿ.ಸಿ.ಸಿ.ಬ್ಯಾಂಕ್ ಲಿಮಿಟೆಡ್, ನಂಜನಗೂಡು ರಸ್ತೆ, ಚಾಮರಾಜನಗರ. | **PMYCH** |
| 40 | ಚಿಕ್ಕಮಗಳೂರು ಡಿ.ಸಿ.ಸಿ.ಬ್ಯಾಂಕ್ ಲಿಮಿಟೆಡ್ ಹೆಡ್ ಆಫೀಸ್, ರತ್ನಗಿರಿ ರಸ್ತೆ, ಚಿಕ್ಕಮಗಳೂರು | **PCMHO** | 41 | ಚಿತ್ರದುರ್ಗ ಡಿ.ಸಿ.ಸಿ.ಬ್ಯಾಂಕ್, ಹೆಡ್ ಆಫೀಸ್, ಡಿ.ಸಿ.ಆಫೀಸ್ ರಸ್ತೆ, ಸಿಟಿ ಕ್ಲಬ್ ಎದುರು, ಚಿತ್ರದುರ್ಗ | **PCDHO** |
| 42 | ಸೌತ್ ಕೆನರಾ ಡಿ.ಸಿ.ಸಿ.ಬ್ಯಾಂಕ್, ಲಿಮಿಟೆಡ್ ಹೆಡ್ ಆಫೀಸ್, ಸದಾಶಿವ್ ಸಹಕಾರ ಸದನ, ಕೊಡಿಯಲ್ ಬೈಲ್, ಮಂಗಳೂರು–575003. | **PSCHO** | 43 | ದಾವಣಗೆರೆ ಡಿ.ಸಿ.ಸಿ.ಬ್ಯಾಂಕ್ ಲಿಮಿಟೆಡ್, ಹೆಡ್ ಆಫೀಸ್, ನಂ.311, 'ಎ' ಬ್ಲಾಕ್, ಡಿ.ದೇವರಾಜ್ ಆರಸ್ ಎಕ್ಸ್‌ಟೆನ್ಷನ್, ಟಿ.ಬಿ.ರಸ್ತೆ, ದಾವಣಗೆರೆ–577006 | **PDGHO** |
| 44 | ಕೆ.ಸಿ.ಸಿ.ಬ್ಯಾಂಕ್ ಲಿಮಿಟೆಡ್, ಹೆಡ್ ಆಫೀಸ್, ಸುಭಾಷ್ ರೋಡ್, ಧಾರವಾಡ. | **PKCHO** | 45 | ಕೆ.ಸಿ.ಸಿ.ಬ್ಯಾಂಕ್ ಲಿಮಿಟೆಡ್, ಹುಬ್ಬಳ್ಳಿ ಬ್ರಾಂಚ್, ಹುಬ್ಬಳ್ಳಿ | **PKCHB** |
| 46 | ಕೆ.ಸಿ.ಸಿ.ಬ್ಯಾಂಕ್ ಲಿಮಿಡೆಟ್, ಗದಗ್ ಬ್ರಾಂಚ್, ಗದಗ | **PKCGG** | 47 | ಗುಲ್ಬರ್ಗ ಡಿ.ಸಿ.ಸಿ.ಬ್ಯಾಂಕ್ ಲಿಮಿಟೆಡ್, ಹೆಡ್ ಆಫೀಸ್, ಶ್ರೀ ಬಸವೇಶ್ವರ ದವಖಾನೆ, ಬಡೇಪುರ್ ಕಾಲೋನಿ, ಗುಲ್ಬರ್ಗ | **PGBHO** |

| ಕ್ರಮ ಸಂಖ್ಯೆ | ಬ್ಯಾಂಕಿನ ಹೆಸರು | ಕೋಡ್ ಸಂ. | ಕ್ರಮ ಸಂಖ್ಯೆ | ಬ್ಯಾಂಕಿನ ಹೆಸರು | ಕೋಡ್ ಸಂ. |
|---|---|---|---|---|---|
| 48 | ಗುಲ್ಬರ್ಗ ಡಿ.ಸಿ.ಸಿ.ಬ್ಯಾಂಕ್ ಲಿಮಿಟೆಡ್, ಎಸ್.ಬಿ.ಹೆಚ್.ಹತ್ತಿರ, ಕಂದೂರ್ ಕಾಂಪ್ಲೆಕ್ಸ್, ಯಾದಗೀರ್ ಬ್ರಾಂಚ್, ಯಾದಗಿರಿ. | PGBYG | 49 | ಹಾಸನ ಡಿ.ಸಿ.ಸಿ.ಬ್ಯಾಂಕ್ ಲಿಮಿಟೆಡ್, ಬಿ.ಎಂ. ರೋಡ್ ಹೆಡ್ ಆಫೀಸ್, ಹಾಸನ | PHSHO |
| 50 | ಕೆ.ಸಿ.ಸಿ. ಬ್ಯಾಂಕ್ ಲಿಮಿಟೆಡ್, ಶಿವಲಿಂಗ ನಗರ, ಗುತ್ತಲ್ ರೋಡ್, ಹಾವೇರಿ ಬ್ರಾಂಚ್, ಹಾವೇರಿ. | PKCHV | 51 | ಕೊಡಗು ಡಿ.ಸಿ.ಸಿ.ಬ್ಯಾಂಕ್ ಲಿಮಿಟೆಡ್, ಜಿ.ಟಿ. ಸರ್ಕಲ್, ಮಡಕೇರಿ | PKDHO |
| 52 | ಕೋಲಾರ ಡಿ.ಸಿ..ಸಿ.ಬ್ಯಾಂಕ್ ಲಿಮಿಟೆಡ್, ಹೆಡ್ ಆಫೀಸ್, ಪಿ.ಬಿ.ಸಂ.11, ಕೋಲಾರ–563101. | PKLHO | 53 | ರಾಯಚೂರು ಡಿ.ಸಿ.ಸಿ.ಬ್ಯಾಂಕ್ ಲಿಮಿಟೆಡ್, ಹೆಡ್ ಪೋಸ್ಟ್ ಆಫೀಸ್ ಎದುರು, ಕೊಪ್ಪಳ | PRCKP |
| 54 | ಮಂಡ್ಯ ಡಿ.ಸಿ.ಸಿ. ಬ್ಯಾಂಕ್ ಲಿಮಿಟೆಡ್, ಹೆಡ್ ಆಫೀಸ್,ಪಿ.ಬಿ. ಸಂ. 14, ಬಸ್ ಸ್ಟಾಂಡ್ ಹತ್ತಿರ, ಮಂಡ್ಯ–571401. | PMDHO | 55 | ಮೈಸೂರು ಡಿ.ಸಿ.ಸಿ. ಬ್ಯಾಂಕ್ ಲಿಮಿಟೆಡ್, ಅಶೋಕ ರೋಡ್, ಮೈಸೂರು | PMYHO |
| 56 | ರಾಯಚೂರು ಡಿ.ಸಿ.ಸಿ.ಬ್ಯಾಂಕ್ ಲಿಮಿಟೆಡ್, ಹೆಡ್ ಆಫೀಸ್, ಗಂಜ್ ರೋಡ್, ರಾಯಚೂರು | PRCHO | 57 | ಶಿವಮೊಗ್ಗ ಡಿ.ಸಿ.ಸಿ,. ಬ್ಯಾಂಕ್ ಲಿಮಿಟೆಡ್, ಹೆಡ್ ಆಫೀಸ್,ಬಾಲರಾಜ್ ಅರಸ್ ರೋಡ್, ಕೋರ್ಟ್ ಹತ್ತಿರ ಶಿವಮೊಗ್ಗ. | PSMHO |
| 58 | ತುಮಕೂರು ಡಿ.ಸಿ.ಸಿ. ಬ್ಯಾಂಕ್ ಲಿಮಿಟೆಡ್, ಎಸ್.ಬಿ.ಎಂ.ರೋಡ್, ತುಮಕೂರು–572101. | PTMHO | 59 | ಸೌತ್ ಕೆನರಾ ಡಿ.ಸಿ.ಸಿ. ಬ್ಯಾಂಕ್ ಲಿಮಿಟೆಡ್, ಉಡುಪಿ ಬ್ರಾಂಚ್. ಮಸೀದ್ ರೋಡ್, ಉಡುಪಿ ಕೋ–ಆಪರೇಟಿವ್ ನೇಕಾರರ ಬಿಲ್ಡಿಂಗ್.ಉಡುಪಿ | PSCUD |
| 60 | ಕೆನರಾ ಡಿ.ಸಿ.ಸಿ. ಬ್ಯಾಂಕ್ ಲಿಮಿಟೆಡ್, ಕಾರವಾರ ಬ್ರಾಂಚ್, ಪೊಲೀಸ್ ಸ್ಟೇಷನ್ ಹತ್ತಿರ. ಕಾರವಾರ | PNKKR | 61 | ಬೆಂಗಳೂರು ಡಿ.ಸಿ.ಸಿ. ಬ್ಯಾಂಕ್ ಲಿಮಿಟೆಡ್, ಬಿ.ಎಂ.ರಸ್ತೆ, ಐಜೂರ್, ರಾಮನಗರ | PBRRM |
| 62 | ಬೆಂಗಳೂರು ಡಿ.ಸಿ.ಸಿ. ಬ್ಯಾಂಕ್ ಲಿಮಿಟೆಡ್, ತಾಲ್ಲೂಕ್ ಆಫೀಸ್ ರಸ್ತೆ, ದೊಡ್ಡಬಳ್ಳಾಪುರ | PBRDB | | | |

**ಅರ್ಹತಾ ಷರತ್ತುಗಳು:–**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಇ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

**5 (1) ನೇಮಕಾತಿ ವಿಧಾನ:–ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಸಂದರ್ಶನ ಮೂಲಕ ಆಯ್ಕೆ**

ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006ರ ಪ್ರಥಮ ತಿದ್ದುಪಡಿ 2007ರಲ್ಲಿ ನಿರ್ದಿಷ್ಟಪಡಿಸಲಾದಂತೆ, ಆಯೋಗದಿಂದ ಅಧಿಸೂಚಿಸಲಾಗಿರುವ ಯಾವುದೇ ತಾಂತ್ರಿಕ ಅಥವಾ ತಾಂತ್ರಿಕೇತರ ಹುದ್ದೆಗಳ ಸಂದರ್ಶನಕ್ಕೆ ಅರ್ಹರಾಗಲು ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ. ಪರೀಕ್ಷೆಯ ಕನ್ನಡ ಪ್ರಥಮ ಭಾಷೆಯ ಮಟ್ಟದ 150 ಅಂಕಗಳಿಗೆ ಪರೀಕ್ಷೆ ನಡೆಸಲಿದ್ದು, ಅದರಲ್ಲಿ ಕನಿಷ್ಠ 50 ಅಂಕಗಳೊಂದಿಗೆ

ಕಡ್ಡಾಯವಾಗಿ ತೇರ್ಗಡೆ ಹೊಂದಲೇಬೇಕು. ನಿಗದಿಪಡಿಸಿದ ಕನಿಷ್ಠ 50 ಅಂಕಗಳನ್ನು ಪಡೆಯದ ಅಭ್ಯರ್ಥಿಗಳು ಸಂದರ್ಶನಕ್ಕೆ ಅರ್ಹರಾಗುವುದಿಲ್ಲ ಹಾಗೂ ಈ ಕನ್ನಡ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ.

(2) ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 19 ಎಸ್‌ಸಿಆರ್ 2006(ಪಿ) ದಿನಾಂಕ 17–04–2008ರಲ್ಲಿ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006ರ (ಎರಡನೇ ತಿದ್ದುಪಡಿಯ) ನಿಯಮ 2008 ರಲ್ಲಿ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯ ವಿನಾಯಿತಿ ಬಗ್ಗೆ ಕೆಳಕಂಡ ಷರತ್ತುಗಳನ್ನು ಸೇರ್ಪಡಿಸಲಾಗಿರುತ್ತದೆ.

"ಎಸ್.ಎಸ್.ಎಲ್.ಸಿ. ಅಥವಾ ಇದಕ್ಕೆ ತತ್ಸಮಾನವೆಂದು ರಾಜ್ಯ ಸರ್ಕಾರದಿಂದ ಘೋಷಿಸಲ್ಪಟ್ಟ ಇತರೆ ಯಾವುದೇ ಪರೀಕ್ಷೆಯಲ್ಲಿ ಅಥವಾ ಎಸ್.ಎಸ್.ಎಲ್.ಸಿ.ಪರೀಕ್ಷೆಗಿಂತ ಮೇಲ್ಮಟ್ಟದ ಯಾವುದೇ ಪರೀಕ್ಷೆಯಲ್ಲಿ ಕನ್ನಡವನ್ನು ಮುಖ್ಯ ಭಾಷೆಯಾಗಿ, ಅಥವಾ ದ್ವಿತೀಯ ಭಾಷೆಯಾಗಿ ಅಥವಾ ಐಚ್ಛಿಕ ವಿಷಯವಾಗಿ (ಆದರೆ ಸಂಯುಕ್ತ ಪತ್ರಿಕೆಯ ವಿಷಯಗಳಲ್ಲೊಂದಾಗಿರಬಾರದು) ಅಥವಾ ಮೇಲಿನ ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿ ತೇರ್ಗಡೆಯಾಗಿರುವ ಅಥವಾ ಕರ್ನಾಟಕ ಲೋಕ ಸೇವಾ ಆಯೋಗದಿಂದ ಈ ಹಿಂದೆ ನಡೆಸಲ್ಪಟ್ಟ ಕಡ್ಡಾಯ ಕನ್ನಡ ಭಾಷೆ ಪರೀಕ್ಷೆಯಲ್ಲಿ ತೇರ್ಗಡೆಯಾಗಿರುವ ಅಭ್ಯರ್ಥಿಗಳು, ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದರಿಂದ ವಿನಾಯಿತಿ ಹೊಂದಿರುತ್ತಾರೆ".

(3) ಉಪ ಕಂಡಿಕೆ (2) ರಲ್ಲಿ ತಿಳಿಸಿರುವ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದಲ್ಲಿ ಅರ್ಜಿಯ ನಿಗದಿತ ಸ್ಥಳದಲ್ಲಿ ವಿವರಗಳನ್ನು ನೀಡತಕ್ಕದ್ದು. ಸರಿಯಾದ ಮಾಹಿತಿ ಒದಗಿಸದಿದ್ದಲ್ಲಿ ಮೇಲಿನ ವಿನಾಯಿತಿಗಳನ್ನು ಪಡೆಯಲು ಅರ್ಹತೆ ನೀಡುವುದಿಲ್ಲ.

**ಸೂಚನೆ:–** ಕನ್ನಡ ಕಡ್ಡಾಯ ಭಾಷಾ ಪರೀಕ್ಷೆ ಬಗ್ಗೆ ಪಠ್ಯಕ್ರಮವನ್ನು ಅಭ್ಯರ್ಥಿಗಳ ಸೂಚನೆಗಳಲ್ಲಿ ಹಾಗೂ ಆಯೋಗದ ವೆಬ್ ಸೈಟ್ **" http://kpsc.kar.nic.in/ ON LINE APPLICATION "** ನಲ್ಲಿ ಬಿತ್ತರಿಸಲಾಗಿದೆ.

**ಸ್ಪರ್ಧಾತ್ಮಕ ಪರೀಕ್ಷಾ ವಿಧಾನ :** ಸ್ಪರ್ಧಾತ್ಮಕ ಪರೀಕ್ಷೆಯು ಕೆಳಕಂಡ ಎರಡು ಪತ್ರಿಕೆಗಳನ್ನೊಳಗೊಂಡಿದ್ದು ವಸ್ತು ನಿಷ್ಠ ಬಹು ಆಯ್ಕೆ (Objective Multiple Choice) ಮಾದರಿಯದಾಗಿರುತ್ತದೆ.

**ಪತ್ರಿಕೆ – 1** (ಸಾಮಾನ್ಯ ಪತ್ರಿಕೆ) (General Paper) 200 ಅಂಕಗಳು – $1^1/_2$ ಘಂಟೆ (ನಿಗದಿತ ವಿದ್ಯಾರ್ಹತೆಯ ಪರೀಕ್ಷೆಯಲ್ಲಿ ತೇರ್ಗಡೆಯಾದ ವ್ಯಕ್ತಿಯಿಂದ ನಿರೀಕ್ಷಿಸಬಹುದಾದ ಸಾಮಾನ್ಯ ಜ್ಞಾನದ ವಿಷಯಗಳಿಗೆ ಸಂಬಂಧಿಸಿದಂತೆ ಪ್ರಚಲಿತ ವಿದ್ಯಮಾನಗಳು, ಸಾಮಾನ್ಯ ವಿಜ್ಞಾನ ಮತ್ತು ದಿನನಿತ್ಯ ಗಮನಿಸಬಹುದಾದ ವಿಷಯಗಳು ಹಾಗೂ ಪ್ರಾಯೋಗಿಕ ಜ್ಞಾನವನ್ನು ಒಳಗೊಂಡಿರುತ್ತದೆ)

ಪತ್ರಿಕೆ–2 (ನಿರ್ದಿಷ್ಟ ಪತ್ರಿಕೆ ) (Specific Paper) – 200 ಅಂಕಗಳು – 2 ಘಂಟೆ

ನಿರ್ದಿಷ್ಟ ಪತ್ರಿಕೆಗೆ ಸಂಬಂಧಿಸಿದ ಪಠ್ಯಕ್ರಮವನ್ನು ಆಯೋಗದ ವೆಬ್ ಸೈಟ್ " http:// kpsc. kar. nic.in/ON LINE APPLICATION" ನಲ್ಲಿ ಬಿತ್ತರಿಸಲಾಗಿದೆ. ಪಠ್ಯಕ್ರಮ ವೆಬ್‌ಸೈಟ್‌ನಿಂದ ಡೌನ್ ಲೋಡ್ ಮಾಡಿಕೊಳ್ಳಬಹುದು.

**(2)ನಗರ ಯೋಜನಾ ಇಲಾಖೆಯಲ್ಲಿ ನಗರ ಯೋಜನಾ ಸಹಾಯಕ ನಿರ್ದೇಶಕರ 18 ಹುದ್ದೆಗಳಿಗೆ ನೇಮಕಾತಿ ವಿಧಾನ:–**

**ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಸಂದರ್ಶನ ಮೂಲಕ ಆಯ್ಕೆ**

ನಗರ ಯೋಜನೆ ಇಲಾಖೆ ಸೇವೆಗಳು (ನೇಮಕಾತಿ) ನಿಯಮಗಳು 1996 ರನ್ವಯ ಆಯೋಗವು ಸ್ಪರ್ಧಾತ್ಮಕ ಪರೀಕ್ಷೆ ಹಾಗೂ ಸಂದರ್ಶನ ಮುಖಾಂತರ ಆಯ್ಕೆ ಮಾಡುತ್ತದೆ.

**ಸ್ಪರ್ಧಾತ್ಮಕ ಪರೀಕ್ಷಾ ವಿಧಾನ :** ಸ್ಪರ್ಧಾತ್ಮಕ ಪರೀಕ್ಷೆಯು ಕೆಳಕಂಡ ಎರಡು ಪತ್ರಿಕೆಗಳನ್ನೊಳಗೊಂಡಿದ್ದು ವಿವರಣಾತ್ಮಕ (Conventional)ಮಾದರಿಯದಾಗಿರುತ್ತದೆ.

**ಪತ್ರಿಕೆ–1** (ಸಾಮಾನ್ಯ ಅಧ್ಯಯನ) (General Studies) 200 ಅಂಕಗಳು – 3 ಘಂಟೆಗಳು

(ಸಾಮಾನ್ಯ ವಿಜ್ಞಾನ, ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಹತ್ವದ ಪ್ರಸಕ್ತ ಘಟನೆಗಳು, ಭಾರತದ ಇತಿಹಾಸ, ವಿಶ್ವ ಭೂಗೋಳಶಾಸ್ತ್ರ, ಭಾರತದ ರಾಜ್ಯಾಡಳಿತ ವ್ಯವಸ್ಥೆ ಮತ್ತು ಆರ್ಥಿಕತೆ, ಭಾರತದ ರಾಷ್ಟ್ರೀಯ ಚಳುವಳಿ ಮತ್ತು ಸಾಮಾನ್ಯ ಬೌದ್ಧಿಕ ಸಾಮರ್ಥ್ಯ)

**ಪತ್ರಿಕೆ–11** (ಅರ್ಬನ್ ರೀಜನಲ್ ಪ್ಲಾನಿಂಗ್) (Urban Regional Planning) 200 ಅಂಕಗಳು – 3 ಘಂಟೆಗಳು

ಅರ್ಬನ್ ರೀಜನಲ್ ಪ್ಲಾನಿಂಗ್ ಪತ್ರಿಕೆಗೆ ಸಂಬಂಧಿಸಿದ ಪಠ್ಯಕ್ರಮವನ್ನು ಆಯೋಗದ ವೆಬ್ ಸೈಟ್ "http: //kpsc.kar. nic.in/ ON LINE APPLICATION " ನಲ್ಲಿ ಬಿತ್ತರಿಸಲಾಗಿದೆ. ಪಠ್ಯಕ್ರಮ ವೆಬ್‌ಸೈಟ್‌ನಿಂದ ಡೌನ್ ಲೋಡ್ ಮಾಡಿಕೊಳ್ಳಬಹುದು.

**ಸೂಚನೆ:** ಸ್ಪರ್ಧಾತ್ಮಕ ಪರೀಕ್ಷೆಯ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಗಳೆರಡರಲ್ಲೂ ಇರುತ್ತದೆ. ಕನ್ನಡ ಭಾಷೆಯಲ್ಲಿರುವ ಪ್ರಶ್ನೆಗಳ ಭಾಷಾಂತರದಲ್ಲಿ ಏನಾದರೂ ಅಸ್ಪಷ್ಟತೆ ಇದ್ದಲ್ಲಿ ಅಭ್ಯರ್ಥಿಗಳು ಆಂಗ್ಲ ಭಾಷೆಯಲ್ಲಿರುವ ಪ್ರಶ್ನೆಗಳನ್ನು ನೋಡುವುದು.

**ಟಿಪ್ಪಣಿ:–** ಪ್ರಶ್ನೆ ಪತ್ರಿಕೆ ಬಗ್ಗೆ ಯಾವುದೇ ಬಗೆಯ ಆಕ್ಷೇಪಣೆ ಇದ್ದಲ್ಲಿ, ಪರೀಕ್ಷಾ ಕೇಂದ್ರವನ್ನು ಬಿಡುವ ಮೊದಲು ಪರೀಕ್ಷಾ ದಿನವೇ ಸಂಬಂಧಿತ ಮೇಲ್ವಿಚಾರಕರ ಮುಖಾಂತರ ಅಭ್ಯರ್ಥಿಯ ಹೆಸರು, ವಿಳಾಸ, ನೋಂದಣಿ ಸಂಖ್ಯೆ ಇತ್ಯಾದಿಗಳನ್ನು ನಮೂದಿಸಿರುವ ಲಿಖಿತ ಮನವಿಯನ್ನು ಆಯೋಗಕ್ಕೆ ಸಲ್ಲಿಸಿ ಸ್ವೀಕೃತಿ **(Acknowledgement)** ಪಡೆಯಬೇಕು. ಪರೀಕ್ಷಾ ಕೇಂದ್ರ ಬಿಟ್ಟ ನಂತರ ಕಳುಹಿಸುವ ಯಾವುದೇ ಆಕ್ಷೇಪಣೆಯನ್ನು ಮಾನ್ಯ ಮಾಡಲಾಗುವುದಿಲ್ಲ.

ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಅರ್ಹರಾದ ನಂತರ (ತಾಂತ್ರಿಕೇತರ ಹುದ್ದೆಗಳಿಗೆ ಮಾತ್ರ) ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006ರ ಉಪನಿಯಮ 6ರನ್ವಯ ಅಭ್ಯರ್ಥಿಗಳು ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡವಾರು ಮತ್ತು ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಆಧಾರದ ಮೇಲೆ 1:5 ಅನುಪಾತದಲ್ಲಿ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಆಹ್ವಾನಿಸಲಾಗುವುದು. ಅಭ್ಯರ್ಥಿಗಳು ಪರೀಕ್ಷೆಗೆ/ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

ಸಂದರ್ಶನ ನಡೆಸುವ ಉದ್ದೇಶ ಎಂದರೆ ಅಭ್ಯರ್ಥಿಗಳು ಆಯ್ಕೆ ಬಯಸಿದ ಹುದ್ದೆಗೆ ಅವರ ಅರ್ಹತೆ, ವ್ಯಕ್ತಿತ್ವ, ಸಂಬಂಧಿತ ವಿಷಯದಲ್ಲಿ ವ್ಯಕ್ತಪಡಿಸುವ ಸಾಮರ್ಥ್ಯತೆ, ಸೂಕ್ಷ್ಮತೆ ಮತ್ತು ಕರ್ತೃತ್ವ ಶಕ್ತಿ, ಸಾಮಾನ್ಯ ಜ್ಞಾನ ಹಾಗೂ ವಿಷಯದಲ್ಲಿನ ಪರಿಜ್ಞಾನ ಹಾಗೂ ಇನ್ನಿತರ ವಿಶೇಷ ಗುಣಗಳನ್ನು ನಿರ್ಧರಿಸುವುದಾಗಿರುತ್ತದೆ.

**ಸಂದರ್ಶನಕ್ಕೆ ನಿಗದಿಪಡಿಸಿದ ಗರಿಷ್ಠ ಅಂಕಗಳು:–** ಸ್ಪರ್ಧಾತ್ಮಕ ಪರೀಕ್ಷೆಗೆ ನಿಗದಿಪಡಿಸಿದ ಒಟ್ಟು ಅಂಕಗಳ ಶೇಕಡ 12.5 ಅಂಕಗಳು

**ನಗರ ಯೋಜನಾ ಸಹಾಯಕ ನಿರ್ದೇಶಕರ 18 ಹುದ್ದೆಗಳಿಗೆ:** ಸ್ಪರ್ಧಾತ್ಮಕ ಪರೀಕ್ಷೆಗೆ ನಿಗದಿಪಡಿಸಿದ ಒಟ್ಟು ಗರಿಷ್ಠ ಅಂಕಗಳ ಶೇಕಡ 5 ರಷ್ಟು ಅಂಕಗಳು.

ಆಯೋಗವು ನಿಯಮಾನುಸಾರ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡವಾರು(ನಗರ ಯೋಜನಾ ಇಲಾಖೆಯ ಸಹಾಯಕ ನಿರ್ದೇಶಕರ ಹುದ್ದೆಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳು) ಮತ್ತು ಸಂದರ್ಶನದಲ್ಲಿ ಗಳಿಸಿದ ಅಂಕಗಳ ಜೇಷ್ಠತೆಯನ್ನು ಆಧರಿಸಿ ಹಾಗೂ ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಗಳನುಸಾರ ಹುದ್ದೆಗಳ ನೇಮಕಾತಿಗಾಗಿ ಇರುವ ಮೀಸಲಾತಿಯನ್ವಯ ಪ್ರಕಟಿಸಲಾದ ಖಾಲಿ ಹುದ್ದೆಗಳ ಸಂಖ್ಯೆಗೆ ಅನುಗುಣವಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡುತ್ತದೆ.

**6. ಶೈಕ್ಷಣಿಕ ವಿದ್ಯಾರ್ಹತೆ ಮತ್ತು ವಯೋಮಿತಿ:–**

**6.1 ಶೈಕ್ಷಣಿಕ ವಿದ್ಯಾರ್ಹತೆ:–** ಅರ್ಜಿಗಳನ್ನು ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅನುಸೂಚಿಯಲ್ಲಿ ಆಯಾ ಹುದ್ದೆಗಳ ಮುಂದೆ ಸೂಚಿಸಿರುವ ಕನಿಷ್ಠ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಹೊಂದಿರಲೇಬೇಕು. ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದದೆ ಹೆಚ್ಚಿನ ವಿದ್ಯಾರ್ಹತೆಯನ್ನು ಹೊಂದಿದ್ದರೂ ಸಹ ಪರಿಗಣಿಸಲಾಗುವುದಿಲ್ಲ.

**6.2 ವಯೋಮಿತಿ:–** ಅನುಸೂಚಿಯಲ್ಲಿ ಆಯಾ ಹುದ್ದೆಗಳ ಮುಂದೆ ಸೂಚಿಸಿದಂತೆ, ಅರ್ಜಿಗಳನ್ನು ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಕನಿಷ್ಠ ವಯೋಮಿತಿಯನ್ನು ಹೊಂದಿರಬೇಕು ಹಾಗೂ ನಿಗದಿತ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

(ಅ) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಆಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಆ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು. (ಈ ಉಪ ಕಂಡಿಕೆಗೆ ಸಂಬಂಧಿಸಿದ ವಿವರಣೆಗಳಿಗೆ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮಗಳು 2 ಮತ್ತು 9 ರನ್ವಯ ಅರ್ಥೈಸಿಕೊಳ್ಳುವುದು)

(ಇ) ಅಭ್ಯರ್ಥಿಗಳು ನ್ಯಾಷನಲ್ ಕ್ಯಾಡೆಟ್ ಕೋರ್‌ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂಥ ಕ್ಯಾಡೆಟ್ ಪರಿವೀಕ್ಷಕನಾಗಿ ಅವನು ಸೇವೆ ಸಲ್ಲಿಸಿದಷ್ಟು ವರ್ಷಗಳು.

**(ಈ)** ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡ ಗ್ರಾಮ ಸಮೂಹ ಪರಿಶೀಲಕನಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅವನು / ಅವಳು ಅಂತಹ ಗ್ರಾಮ ಪರಿಶೀಲಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

**(ಉ)** ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು

**(ಊ)** ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಆವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 5 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

**(ಋ)** ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು.

**(ೠ)** ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದ ಪಕ್ಷದಲ್ಲಿ 10 ವರ್ಷಗಳು.

ಉಪ ಕಂಡಿಕೆ 6.2.(ೠ) ರ ಮೇರೆಗೆ ವಯೋಮಿತಿಯ ಸಡಿಲಿಕೆಯನ್ನು ಕೋರುವ ಅಭ್ಯರ್ಥಿಯು ಜೀತ ಕಾರ್ಮಿಕ ನಾಗಿದ್ದು, ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತ ಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ರಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸಬೇಕು.

7. **<u>ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು</u>** :–

ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು:–

ಅ) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ ' ಡಿ ' ರಲ್ಲಿ

ಆ) ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ ' ಇ ' ರಲ್ಲಿ

ಇ) ಪ್ರವರ್ಗ–2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ನಮೂನೆ ' ಎಫ್ ' ರಲ್ಲಿ

ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಿತ ತಹಸೀಲ್ದಾರ್‌ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ನಿಯಮಾನುಸಾರ ಸಾಮಾನ್ಯ ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು. (ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅಭ್ಯರ್ಥಿಗಳ ಸೂಚನೆಗಳಲ್ಲಿ ತೋರಿಸಲಾಗಿದೆ. ಈ ನಮೂನೆಗಳನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಗಳಲ್ಲಿ ಸಲ್ಲಿಸಲ್ಪಡುವ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು) (ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದು).

**8. <u>ಗ್ರಾಮೀಣ ಅಭ್ಯರ್ಥಿ</u>**

ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 08 ಸೆನೆನಿ 2001 ದಿನಾಂಕ 13–02–2001 ರನ್ವಯ ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2ನ್ನು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜುವಿನೊಂದಿಗೆ ಹಾಗೂ ಈ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2ರಲ್ಲಿ ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜು ಪಡೆದಿಟ್ಟುಕೊಂಡಿರತಕ್ಕದ್ದು. ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಇತರೆ ನಮೂನೆಗಳಲ್ಲಿ ಸಲ್ಲಿಸಲ್ಪಡುವ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು ಹಾಗೂ ಅಂತಹವರು ಗ್ರಾಮೀಣ ಮೀಸಲಾತಿಗೆ ಅನರ್ಹರಾಗುತ್ತಾರೆ. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಮಾಹಿತಿ ಪುಸ್ತಕದಲ್ಲಿ ತೋರಿಸಲಾಗಿದೆ. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು).

9. <u>ಕನ್ನಡ ಮಾಧ್ಯಮ ಅಭ್ಯರ್ಥಿ</u>

ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಆಸುಇ 71 ಸೇನೆನಿ 2001 ದಿನಾಂಕ 24–10–2002 ರನ್ವಯ ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಪಡೆದಿಟ್ಟುಕೊಂಡಿರತಕ್ಕದ್ದು. ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಈ ಪ್ರಮಾಣ ಪತ್ರದ ನಮೂನೆಯನ್ನು ಮಾಹಿತಿ ಪುಸ್ತಕದಲ್ಲಿ ತೋರಿಸಲಾಗಿದೆ) (ಕಮಾಅ ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದು)

10. <u>ಅಂಗವಿಕಲ ಅಭ್ಯರ್ಥಿ</u>

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್ಆರ್ಆರ್ 2000 ದಿನಾಂಕ 03–09–2005 ರಲ್ಲಿ ರಾಜ್ಯ ಸಿವಿಲ್ ಸೇವೆಗಳ ಸಮೂಹ –' ಎ ' ಮತ್ತು ' ಬಿ ' ಗುಂಪಿನ ಹುದ್ದೆಗಳಿಗೆ ಶೇಕಡ 3 ರಷ್ಟು (ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 104 ಎಸ್ಆರ್ಆರ್ 2005 ದಿನಾಂಕ 13–09–2005ರ ಅನುಸೂಚಿಯಡಿ ಸೇರ್ಪಡೆ ಮಾಡಲಾಗಿರುವ ಇಲಾಖೆಗಳು) ಮತ್ತು ಸಮೂಹ ' ಸಿ ' ಗುಂಪಿನ ಹುದ್ದೆಗಳಿಗೆ ಶೇಕಡ 5 ರಷ್ಟು (ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 52 ಎಸ್ಆರ್ಆರ್ 99 ದಿನಾಂಕ 29–11–2002ರ ಅನುಸೂಚಿಯಡಿ ಸೇರ್ಪಡಿಸಲಾಗಿರುವ ಇಲಾಖೆಗಳು) ಹುದ್ದೆಗಳನ್ನು ಅಂಗವಿಕಲರಿಗೆ ಮೀಸಲಾತಿ ಕಲ್ಪಿಸಿದ್ದು, ಇದರನ್ವಯ ಶೇಕಡ 40 ಕ್ಕಿಂತ ಕಡಿಮೆ ಇಲ್ಲದಂತಹ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಮಾತ್ರ ಈ ಮೀಸಲಾತಿಯನ್ನು ಕೋರಲು ಅರ್ಹರು. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 115 ಸೇನೆನಿ 2005 ದಿನಾಂಕ 19–11–2005ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸಲು ಬರುವುದಿಲ್ಲ. (ಈ ಪ್ರಮಾಣ ಪತ್ರದ ನಮೂನೆಯನ್ನು ಮಾಹಿತಿ ಪುಸ್ತಕದಲ್ಲಿ ತೋರಿಸಲಾಗಿದೆ) (ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು)

11. <u>ಯೋಜನೆಗಳಿಂದ ನಿರಾಶ್ರಿತ ಅಭ್ಯರ್ಥಿ</u>

ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 23 ಸೇನೆನಿ 99 ದಿನಾಂಕ 23–11–2000 ರನ್ವಯ ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು **<u>(ಗ್ರೂಪ್ 'ಸಿ' ಹುದ್ದೆಗಳಿಗೆ ಮಾತ್ರ)</u>** ಕ್ಲೇಮು ಮಾಡುವ ಅಭ್ಯರ್ಥಿಗಳು ಸಂಬಂಧಿತ ತಹಶೀಲ್ದಾರ್‌ರವರಿಂದ ' ಪಡೆದಿಟ್ಟುಕೊಂಡಿರತಕ್ಕದ್ದು. ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಮಾಹಿತಿ ಪುಸ್ತಕದಲ್ಲಿ ತೋರಿಸಲಾಗಿದೆ. ಈ ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು)

**12. ಕಡ್ಡಾಯ ಕನ್ನಡ ಭಾಷಾ / ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಬೆಂಗಳೂರು / ಮೈಸೂರು / ಧಾರವಾಡ / ಗುಲ್ಬರ್ಗಾ / ಶಿವಮೊಗ್ಗ ಕೇಂದ್ರಗಳಲ್ಲಿ ಹಾಗೂ ಆಯೋಗವು ನಿಗದಿಪಡಿಸಿರುವ ಇತರೆ ಯಾವುದೇ ಕೇಂದ್ರ ಸ್ಥಳದಲ್ಲಿ ನಡೆಸಲಾಗುವುದು. ಅಭ್ಯರ್ಥಿಗಳು ಅರ್ಜಿ ನಮೂನೆಯಲ್ಲಿ ಅವರು ಕಡ್ಡಾಯ ಕನ್ನಡ ಭಾಷಾ ಪರೀಕ್ಷೆ / ಸ್ಪರ್ಧಾತ್ಮಕ ಪರೀಕ್ಷೆ ತೆಗೆದುಕೊಳ್ಳಲು ಇಚ್ಛಿಸುವ ಕೇಂದ್ರವನ್ನು ನಮೂದಿಸತಕ್ಕದ್ದು. ಪರೀಕ್ಷಾ ಕೇಂದ್ರವನ್ನು ನಿಗದಿಪಡಿಸುವುದು ಆಯೋಗದ ಅಂತಿಮ ತೀರ್ಮಾನವಾಗಿರುತ್ತದೆ. ಸಂದರ್ಶನ / ಪರೀಕ್ಷೆಗಳ ದಿನಾಂಕವನ್ನು ಮುಂದೆ ಜಾಹೀರಾತುಪಡಿಸಲಾಗುವುದು ಹಾಗೂ ಆಯೋಗದ ವೆಬ್ ಸೈಟ್ "<u>http://kpsc.kar.nic in/ON LINE APPLICATION</u>"ನಲ್ಲಿಯೂ ಬಿತ್ತರಿಸಲಾಗುವುದು. ಪರೀಕ್ಷೆಗಳ ದಿನಾಂಕಗಳನ್ನು ಅಧಿಸೂಚಿಸಿದಾಗ <u>ಪ್ರವೇಶ ಪತ್ರಗಳನ್ನು ಆಯೋಗದ ಅಂತರ್ಜಾಲದಿಂದ ಅಭ್ಯರ್ಥಿಗಳು ಡೌನ್ ಲೋಡ್ ಮಾಡಿಕೊಳ್ಳಬೇಕು. ಅಭ್ಯರ್ಥಿಗಳಿಗೆ ಪ್ರವೇಶ ಪತ್ರಗಳನ್ನು ಪ್ರತ್ಯೇಕವಾಗಿ ರವಾನಿಸಲಾಗುವುದಿಲ್ಲ.</u>**

13. <u>ಆಯೋಗದೊಡನೆ ಪತ್ರ ವ್ಯವಹಾರ:</u>

ಆಯೋಗವು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರನ್ನು ನಡೆಸುವುದಿಲ್ಲ. ಸಂದರ್ಶನಕ್ಕೆ ಅನುಮತಿಸಲಾದ ಅಭ್ಯರ್ಥಿಯಾಗಿದ್ದರೆ ಸಂದರ್ಶನ ಪತ್ರದ ನಕಲನ್ನು ನೀಡಲಾಗುವುದು.

ವಿಳಾಸ ಬದಲಾವಣೆ ಇದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮೂಲಕ ಆಯೋಗದ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಆಯೋಗವು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಆಯೋಗವು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು. ಅಭ್ಯರ್ಥಿಗಳು ಆಯೋಗದೊಡನೆ ಸಂಪರ್ಕಿಸಲೇಬೇಕಾದ ಸಂದರ್ಭದಲ್ಲಿ ತಮ್ಮ ಮನವಿಯಲ್ಲಿ ಕೆಳಕಂಡ ಮಾಹಿತಿಗಳು ಒಳಗೊಂಡಿರಬೇಕು:–

(i) ಹುದ್ದೆಯ / ವಿಷಯದ ಹೆಸರು

(ii) ಅಭ್ಯರ್ಥಿಯ ಪೂರ್ಣ ಹೆಸರು (ಬಿಡಿ ಅಕ್ಷರಗಳಲ್ಲಿ)

(iii) ಅರ್ಜಿಯಲ್ಲಿ ನಮೂದಿಸಿರುವ ಅಂಚೆ ವಿಳಾಸ

**14. <u>ಪ್ರಾಮುಖ್ಯವಾದ ಸೂಚನೆಗಳು:–</u>**

ಅಭ್ಯರ್ಥಿಯ ಇತ್ತೀಚಿನ ಪಾಸ್ ಪೋರ್ಟ್ ಅಳತೆಯ ಭಾವಚಿತ್ರವನ್ನು ಒಂದು ಹಾಳೆಯ ಮೇಲಿಟ್ಟು ಅದರ ಕೆಳಗೆ ಕಪ್ಪು ಶಾಹಿಯ ಸ್ಕೆಚ್ / ಮಾರ್ಕರ್ ಪೆನ್‌ರಲ್ಲಿ ಸಹಿಯನ್ನು ಮಾಡಿ ಇದನ್ನು ಸ್ಕ್ಯಾನ್ ಮಾಡಿ ಅರ್ಜಿಗೆ **UPLOAD** ಮಾಡಬೇಕು. ಈ ಕೆಳಕಂಡ ಪ್ರಮಾಣ ಪತ್ರಗಳನ್ನು ನಿಗದಿತ ನಮೂನೆಯಲ್ಲಿ **ON LINE ಮೂಲಕ** ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಈ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಇವರ ಮೀಸಲಾತಿಯನ್ನು/ಅಭ್ಯರ್ಥಿತ್ವವನ್ನು ಪರಿಗಣಿಸಲಾಗುವುದಿಲ್ಲ.

1) ಹುದ್ದೆಗೆ ನಿಗದಿಪಡಿಸಿದ ಶುಲ್ಕ (ಅರ್ಜಿಯನ್ನು ಭರ್ತಿಮಾಡುವ ಮುನ್ನ ಪಾವತಿಸತಕ್ಕದ್ದು)
2) ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ /ಸೆಮಿಸ್ಟರ್‌ಗಳ ಅಂಕಪಟ್ಟಿಗಳು ಹಾಗೂ ಘಟಿಕೋತ್ಸವದ ಪ್ರಮಾಣ ಪತ್ರಗಳು /ಗ್ರೇಡ್‌ನ್ನು ಶೇಕಡವಾರು ಅಂಕಗಳಿಗೆ ಪರಿವರ್ತಿಸಿದ ಪ್ರಮಾಣ ಪತ್ರ
3) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗ.
4) ಹುದ್ದೆಗೆ ಅನುಭವ / ತರಬೇತಿ ನಿಗದಿಪಡಿಸಿದ್ದಲ್ಲಿ ಅದರ ಪ್ರಮಾಣ ಪತ್ರಗಳು
5) ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)
6) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಮತ್ತು ಪ್ರವರ್ಗ–3ಬಿ ಮೀಸಲಾತಿ ಪ್ರಮಾಣ ಪತ್ರಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ (ಮೀಸಲಾತಿ ಕೋರಿದ್ದಲ್ಲಿ)
7) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
8) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
9) ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
10) ಯೋಜನೆಗಳಿಂದ ನಿರಾಶ್ರಿತರಾದ ಅಭ್ಯರ್ಥಿಯ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

(ಮೇಲಿನ ಕ್ರಮ ಸಂಖ್ಯೆ 6, 7, 8, 9 ಮತ್ತು 10 ರ ಮೀಸಲಾತಿ ಪ್ರಮಾಣ ಪತ್ರಗಳ ನಮೂನೆಗಳನ್ನು ಅಭ್ಯರ್ಥಿಗಳ ಸೂಚನೆಗಳಲ್ಲಿ ತೋರಿಸಲಾಗಿದೆ. ನಿಗದಿಪಡಿಸಿದ ನಮೂನೆಗಳಲ್ಲಿ ಮೀಸಲಾತಿಯನ್ನು ಕೋರದೇ ಇತರೆ ನಮೂನೆಗಳಲ್ಲಿ ಕೋರಿದ್ದಲ್ಲಿ ಮೀಸಲಾತಿಯನ್ನು ತಿರಸ್ಕರಿಸಲಾಗುವುದು).

**15. <u>ವಿಶೇಷ ಸೂಚನೆಗಳು:–</u>**

(1) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ **<u>ON LINE ಮೂಲಕ</u>** ಭರ್ತಿ ಮಾಡಿದ ಅರ್ಜಿಯ ಒಂದು ಪ್ರತಿಯನ್ನು ಡೌನ್ ಲೋಡ್ ಮಾಡಿ ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ ಹಾಗೂ ಅರ್ಜಿಯ ಕೊನೆಯ ಭಾಗದಲ್ಲಿ ಇರುವ ಸ್ವೀಕೃತಿಯನ್ನು ಡೌನ್ ಲೋಡ್ ಮಾಡಿ ಇಟ್ಟುಕೊಳ್ಳುವುದು.

(2) ಈಗಾಗಲೇ ಸೇವೆಯಲ್ಲಿರುವ / ಸೇವೆ ಸಲ್ಲಿಸಿದ ಅಭ್ಯರ್ಥಿಗಳು ಅವರುಗಳ ನೇಮಕಾತಿ ಪ್ರಾಧಿಕಾರಿಗಳಿಂದ ಕೊನೆಯ ದಿನಾಂಕದೊಳಗೆ ಅನುಮತಿಯನ್ನು ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ವಿವರಗಳನ್ನು ಅರ್ಜಿಯಲ್ಲಿ ನಮೂದಿಸತಕ್ಕದ್ದು.

(3) ಅರ್ಜಿಗಳನ್ನು ಭರ್ತಿ ಮಾಡಲು ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಭರ್ತಿ ಮಾಡಲು ಕೊನೆಯ ದಿನಾಂಕವಾಗುವುದು.

**16. <u>ದುರ್ನಡತೆ:–</u>** ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ/ ಸಂದರ್ಶನದಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಅನುಸರಿಸಲು ಪ್ರಯತ್ನಿಸಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅವನು / ಅವಳು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ಹುದ್ದೆಯ ಸಂದರ್ಶನದಿಂದ / ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**ಅನುಸೂಚಿ**

**ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ 1 ಆರ್‌ಟಿಬಿ–1/2009 ದಿನಾಂಕ: 03–07–2009**

**ಅರ್ಜಿಗಳನ್ನು ಭರ್ತಿ ಮಾಡಲು ಕೊನೆಯ ದಿನಾಂಕ: 05–08–2009 ಸಂಜೆ 5:30 ಗಂಟೆ**

<table>
<tr><th>ಹುದ್ದೆಗಳ ಅನುಕ್ರಮ ಸಂಖ್ಯೆ</th><th>ಹುದ್ದೆಯ ಸಂಕೇತ/ POST CODE</th><th>ಇಲಾಖೆಯ ಹೆಸರು ಹುದ್ದೆಯ ಪದನಾಮ ಮತ್ತು ಸಂಖ್ಯೆ</th><th>ವೇತನ ಶ್ರೇಣಿ</th><th>ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆ</th><th>ವಯೋಮಿತಿ (ವಯಸ್ಸು ವರ್ಷಗಳಲ್ಲಿ)</th><th>ಹುದ್ದೆಗಳ ವರ್ಗೀಕರಣ</th></tr>
<tr><td>(1)</td><td>(2)</td><td>(3)</td><td>(4)</td><td>(5)</td><td>(6)</td><td>(7)</td></tr>
<tr><td colspan="7">ಗ್ರೂಪ್– ‘ ಎ ’ ಹುದ್ದೆಗಳು</td></tr>
<tr><td>01–18</td><td>01</td><td>ನಗರ ಯೋಜನಾ ಇಲಾಖೆಯಲ್ಲಿ ನಗರ ಯೋಜನಾ ಸಹಾಯಕ ನಿರ್ದೇಶಕರ 18 ಹುದ್ದೆಗಳು<br>Assistant Director of Town Planning – 18 posts</td><td>ರೂ: 14050–25050</td><td>1. Must possess a Degree in Civil Engineering or in Architecture from a recognised University or a certificate from the Institute of Engineers that he has passed Part-A & B of the Associate Membership Examination of Institute of Engineers; and<br>2. A Post-Graduate Degree or Diploma in Town & Country Planning or Urban Design or Urban Planning or City Planning or Landscape Architecture or Transportation Planning or such other equivalent qualification recognised by the Institute of Town Planners, India for appointment & also for Membership of the Institute of Town Planners, India.</td><td>ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 38<br>ಪ.ಜಾ, ಪ.ಪಂ, ಪ್ರ 1 } 40</td><td>
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಮಾಸೈ</th><th>ಕಮಾಅ</th><th>ಒಟ್ಟು</th></tr>
<tr><td>ಪ.ಜಾ.</td><td>01</td><td>01</td><td>01</td><td>–</td><td>–</td><td>03</td></tr>
<tr><td>ಪ್ರ.ವರ್ಗ–1</td><td>–</td><td>01</td><td>–</td><td>–</td><td>–</td><td>01</td></tr>
<tr><td>ಪ್ರ.2(ಎ)</td><td>01</td><td>01</td><td>01</td><td>–</td><td>–</td><td>03</td></tr>
<tr><td>ಪ್ರ.3(ಎ)</td><td>01</td><td>–</td><td>–</td><td>–</td><td>–</td><td>01</td></tr>
<tr><td>ಪ್ರ.3(ಬಿ)</td><td>01</td><td>–</td><td>–</td><td>–</td><td>–</td><td>01</td></tr>
<tr><td>ಸಾ.ಅ.</td><td>02</td><td>02</td><td>03</td><td>01</td><td>01</td><td>09</td></tr>
<tr><td>ಒಟ್ಟು</td><td>06</td><td>05</td><td>05</td><td>01</td><td>01</td><td>18</td></tr>
</table>
</td></tr>
<tr><td colspan="7">ಗ್ರೂಪ್– ‘ ಬಿ ’ ಹುದ್ದೆಗಳು</td></tr>
<tr><td>19–20</td><td>02</td><td>ತಾಂತ್ರಿಕ ಶಿಕ್ಷಣ ಇಲಾಖೆಯ ಸರ್ಕಾರಿ ಕಿರಿಯ ತಾಂತ್ರಿಕ ಶಾಲೆ ಯಲ್ಲಿ ವಿಜ್ಞಾನ ಉಪನ್ಯಾಸಕರ 02 ಹುದ್ದೆಗಳು<br>Science Lecturer – 02 posts</td><td>ರೂ: 10800–20025</td><td>Must be holder of second class Degree in Science with Physics / Chemistry/ Mathematics with B.Ed. Degree.</td><td>– ಅದೇ –</td><td>ಪ್ರವರ್ಗ–1(ಇತರೆ) – 01 ಹುದ್ದೆ<br>ಸಾಮಾನ್ಯ ಅರ್ಹತೆ (ಮಹಿಳೆ)–01 ಹುದ್ದೆ</td></tr>
</table>

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr><td colspan="7"><u>ಗ್ರೂಪ್– ‘ ಸಿ ’ ಹುದ್ದೆಗಳು</u></td></tr>
<tr>
<td>01–34</td>
<td>03</td>
<td>ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಆಶ್ರಮ ಶಾಲಾ ಶಿಕ್ಷಕರ 34 ಹುದ್ದೆಗಳು<br>Backward Classes Welfare Dept.- Ashrama Shala Shikshaks - 34 posts</td>
<td>ರೂ. 6250–12,000</td>
<td>Must have passed SSLC or equivalent Examination with TCH Training.</td>
<td>ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 38<br>ಪ.ಜಾ, ಪ.ಪಂ, ಪ್ರ–1 } 40</td>
<td>
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಮಾಸೆ</th><th>ಕಮಾಅ</th><th>ಯೋ.ಅ</th><th>ಒಟ್ಟು</th></tr>
<tr><td>ಪ.ಜಾ</td><td>02</td><td>02</td><td>02</td><td>–</td><td>–</td><td>–</td><td>06</td></tr>
<tr><td>ಪ.ಪಂ</td><td>01</td><td>–</td><td>–</td><td>–</td><td>–</td><td>–</td><td>01</td></tr>
<tr><td>ಪ್ರ.1</td><td>01</td><td>01</td><td>–</td><td>–</td><td>–</td><td>–</td><td>02</td></tr>
<tr><td>ಪ್ರ.2(ಎ)</td><td>02</td><td>02</td><td>01</td><td>–</td><td>–</td><td>–</td><td>05</td></tr>
<tr><td>ಪ್ರ.2(ಬಿ)</td><td>01</td><td>–</td><td>–</td><td>–</td><td>–</td><td>–</td><td>01</td></tr>
<tr><td>ಪ್ರ.3(ಎ)</td><td>01</td><td>–</td><td>–</td><td>–</td><td>–</td><td>–</td><td>01</td></tr>
<tr><td>ಪ್ರ.3(ಬಿ)</td><td>01</td><td>–</td><td>–</td><td>–</td><td>–</td><td>–</td><td>01</td></tr>
<tr><td>ಸಾ.ಅ</td><td>04</td><td>05</td><td>05</td><td>01</td><td>01</td><td>01</td><td>17</td></tr>
<tr><td>ಒಟ್ಟು</td><td>13</td><td>10</td><td>08</td><td>01</td><td>01</td><td>01</td><td>34</td></tr>
</table>
</td>
</tr>
<tr>
<td>35–36</td>
<td>04</td>
<td>ಅಡ್ವೋಕೇಟ್ ಜನರಲ್‌ರವರ ಕಛೇರಿ, ಬೆಂಗಳೂರು, ಇಲ್ಲಿ ಗ್ರಂಥಾಲಯ ಸಹಾಯಕರ 02 ಹುದ್ದೆಗಳು<br>Library Assistant - 02 posts</td>
<td>ರೂ. 5,800–10,500</td>
<td>1) A pass in S.S.L.C. or possess equivalent qualification.<br>2) Must be holder of a Diploma in Library Science or certificate in Library Science with three years service in a Public Library or a Library under the control of Department of Public Libraries, Government of Karnataka.</td>
<td>– ಅದೇ –</td>
<td>
<table>
<tr><th>ಮೀಸಲಾತಿ</th><th>ಇತರೆ</th></tr>
<tr><td>ಸಾ.ಅ</td><td>01</td></tr>
<tr><td>ಪ.ಜಾ</td><td>01</td></tr>
<tr><td>ಒಟ್ಟು</td><td>02</td></tr>
</table>
</td>
</tr>
</table>

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr>
<td>37–63</td>
<td>05</td>
<td>ಸಮಾಜ ಕಲ್ಯಾಣ ಇಲಾಖೆಯಲ್ಲಿ ಸೀನಿಯರ್ ವಾರ್ಡನ್ (ಬಾಲಕ) (ಬಾಲಕಿಯರು) 27 ಹುದ್ದೆಗಳು<br>Social Welfare Dept. - Senior Warden (Boys) (Girls) 27 posts</td>
<td>ರೂ. 8825–16000</td>
<td>1) A degree in Arts / Science / Commerce.<br>2) A degree in Education.</td>
<td>ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 38<br>ಪ.ಜಾ, ಪ.ಪಂ, ಪ್ರ–1 } 40</td>
<td>ಸೀನಿಯರ್ ವಾರ್ಡನ್ (ಬಾಲಕ) (ಬಾಲಕಿಯರು)–27
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಮಾಸೈ</th><th>ಯೋ.ಅ</th><th>ಅಂ.ವಿ</th><th>ಕಮಾಅ</th><th>ಒಟ್ಟು</th></tr>
<tr><td>ಪ.ಜಾ</td><td>01</td><td>02</td><td>01</td><td>–</td><td>–</td><td>*01</td><td>–</td><td>05</td></tr>
<tr><td>ಪ.ಪಂ</td><td>01</td><td>–</td><td>–</td><td>–</td><td>–</td><td>–</td><td>–</td><td>01</td></tr>
<tr><td>ಪ್ರ.1</td><td>01</td><td>–</td><td>–</td><td>–</td><td>–</td><td>–</td><td>–</td><td>01</td></tr>
<tr><td>ಪ್ರ.2(ಎ)</td><td>01</td><td>01</td><td>01</td><td>–</td><td>–</td><td>*01</td><td>–</td><td>04</td></tr>
<tr><td>ಪ್ರ.2(ಬಿ)</td><td>01</td><td>–</td><td>–</td><td>–</td><td>––</td><td>–</td><td>–</td><td>01</td></tr>
<tr><td>ಪ್ರ.3(ಎ)</td><td>01</td><td>–</td><td>–</td><td>–</td><td>––</td><td>–</td><td>–</td><td>01</td></tr>
<tr><td>ಪ್ರ.3(ಬಿ)</td><td>01</td><td>–</td><td>–</td><td>–</td><td>––</td><td>–</td><td>–</td><td>01</td></tr>
<tr><td>ಸಾ.ಅ</td><td>03</td><td>04</td><td>04</td><td>01</td><td>–</td><td>*01</td><td>–</td><td>13</td></tr>
<tr><td>ಒಟ್ಟು</td><td>10</td><td>07</td><td>06</td><td>01</td><td>–</td><td>*03</td><td>–</td><td>27</td></tr>
<tr><td colspan="9">* ಅಂಗವಿಕಲ ಅಭ್ಯರ್ಥಿಗಳಿಗೆ 03 ಹುದ್ದೆಗಳನ್ನು ಮೀಸಲಿರಿಸಿದ್ದು, ಈ ಹುದ್ದೆಗೆ ಕುಷ್ಠರೋಗದಿಂದ ಗುಣಮುಖರಾದವರು, ಶ್ರವಣದೋಷವುಳ್ಳವರು, ಚಲನವಲನ ವೈಕಲ್ಯ, ಮತ್ತು ಮಾನಸಿಕ ಅಸ್ವಸ್ಥ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರಿರುತ್ತಾರೆ.</td></tr>
</table>
</td>
</tr>
<tr>
<td>64–313</td>
<td>06</td>
<td>ಸಮಾಜ ಕಲ್ಯಾಣ ಇಲಾಖೆಯಲ್ಲಿ ವಾರ್ಡನ್ (ಬಾಲಕ) (ಬಾಲಕಿಯರು) 250 ಹುದ್ದೆಗಳು<br>Social Welfare Dept. - Warden (Boys)(Girls) 250 posts</td>
<td>ರೂ. 7275–13350</td>
<td>Must be a holder of a degree with degree in education.</td>
<td>– ಅದೇ –</td>
<td>ವಾರ್ಡನ್ (ಬಾಲಕ) (ಬಾಲಕಿಯರು)–250
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಮಾಸೈ</th><th>ಯೋ.ಅ</th><th>ಅಂ.ವಿ</th><th>ಕಮಾ.ಅ</th><th>ಒಟ್ಟು</th></tr>
<tr><td>ಪ.ಜಾ</td><td>07</td><td>12</td><td>10</td><td>03</td><td>02</td><td>*02</td><td>02</td><td>38</td></tr>
<tr><td>ಪ.ಪಂ</td><td>02</td><td>03</td><td>02</td><td>–</td><td>–</td><td>*01</td><td>–</td><td>08</td></tr>
<tr><td>ಪ್ರ.1</td><td>02</td><td>03</td><td>03</td><td>01</td><td>–</td><td>*01</td><td>–</td><td>10</td></tr>
<tr><td>ಪ್ರ.2(ಎ)</td><td>07</td><td>11</td><td>10</td><td>03</td><td>02</td><td>*02</td><td>02</td><td>37</td></tr>
<tr><td>ಪ್ರ.2(ಬಿ)</td><td>02</td><td>03</td><td>03</td><td>01</td><td>–</td><td>*01</td><td>–</td><td>10</td></tr>
<tr><td>ಪ್ರ.3(ಎ)</td><td>02</td><td>03</td><td>03</td><td>01</td><td>–</td><td>*01</td><td>–</td><td>10</td></tr>
<tr><td>ಪ್ರ.3(ಬಿ)</td><td>03</td><td>04</td><td>03</td><td>01</td><td>–</td><td>*01</td><td>–</td><td>12</td></tr>
<tr><td>ಸಾ.ಅ</td><td>25</td><td>38</td><td>31</td><td>12</td><td>06</td><td>*07</td><td>06</td><td>125</td></tr>
<tr><td>ಒಟ್ಟು</td><td>50</td><td>77</td><td>65</td><td>22</td><td>10</td><td>*16</td><td>10</td><td>250</td></tr>
<tr><td colspan="9">* ಅಂಗವಿಕಲ ಅಭ್ಯರ್ಥಿಗಳಿಗೆ 16 ಹುದ್ದೆಗಳನ್ನು ಮೀಸಲಿರಿಸಿದ್ದು, ಈ ಹುದ್ದೆಗೆ ಕುಷ್ಠರೋಗದಿಂದ ಗುಣಮುಖರಾದವರು, ಶ್ರವಣದೋಷವುಳ್ಳವರು, ಚಲನವಲನ ವೈಕಲ್ಯ, ಮತ್ತು ಮಾನಸಿಕ ಅಸ್ವಸ್ಥ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರಿರುತ್ತಾರೆ.</td></tr>
</table>
</td>
</tr>
</table>

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr>
<td>314–547</td>
<td>07</td>
<td>ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ: ನಿಲಯ ಮೇಲ್ವಿಚಾರಕರು (ಪುರುಷ) – 234<br>Backward Classes Welfare Dept - Hostel Supervisor (Male)-234 posts</td>
<td rowspan="2">ರೂ. 7275–13350</td>
<td rowspan="2">Must be holder of a degree with degree in education.</td>
<td>ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ – 38<br>ಪ.ಜಾ, ಪ.ಪಂ, ಪ್ರ–1 – 40</td>
<td>
<u>ನಿಲಯ ಮೇಲ್ವಿಚಾರಕರು (ಪುರುಷ)–234</u>
<table>
<tr><th>ಮೀಸಲಾತಿ</th><th>ಇತರೆ</th><th>ಗ್ರಾ</th><th>ಮಾ.ಸೈ.</th><th>ಕ.ಮಾ.ಅ</th><th>ಯೋ.ಅ</th><th>ಒಟ್ಟು</th></tr>
<tr><td>ಪ.ಜಾ</td><td>19</td><td>08</td><td>04</td><td>02</td><td>02</td><td>35</td></tr>
<tr><td>ಪ.ಪಂ</td><td>03</td><td>02</td><td>–</td><td>01</td><td>–</td><td>06</td></tr>
<tr><td>ಪ್ರ.1</td><td>05</td><td>02</td><td>01</td><td>01</td><td>01</td><td>10</td></tr>
<tr><td>ಪ್ರ.2(ಎ)</td><td>19</td><td>09</td><td>04</td><td>02</td><td>02</td><td>36</td></tr>
<tr><td>ಪ್ರ.2(ಬಿ)</td><td>05</td><td>02</td><td>01</td><td>01</td><td>01</td><td>10</td></tr>
<tr><td>ಪ್ರ.3(ಎ)</td><td>04</td><td>02</td><td>01</td><td>01</td><td>01</td><td>09</td></tr>
<tr><td>ಪ್ರ.3(ಬಿ)</td><td>06</td><td>03</td><td>01</td><td>–</td><td>01</td><td>11</td></tr>
<tr><td>ಸಾ.ಅ</td><td>64</td><td>30</td><td>11</td><td>06</td><td>06</td><td>117</td></tr>
<tr><td>ಒಟ್ಟು</td><td>125</td><td>58</td><td>23</td><td>14</td><td>14</td><td>234</td></tr>
</table>
ಪುರುಷ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಬೇಕು.
</td>
</tr>
<tr>
<td>548–650</td>
<td>08</td>
<td>ನಿಲಯ ಮೇಲ್ವಿಚಾರಕರು (ಮಹಿಳೆ) – 103 ಹುದ್ದೆಗಳು<br>Backward Classes Welfare Dept. - Hostel Supervisor (Female)-103 posts</td>
<td>– ಅದೇ –</td>
<td>
<u>ನಿಲಯ ಮೇಲ್ವಿಚಾರಕರು (ಮಹಿಳೆ)–103</u>
<table>
<tr><th>ಮೀಸಲಾತಿ</th><th>ಇತರೆ</th><th>ಗ್ರಾ</th><th>ಮಾಸೈ.</th><th>ಕಮಾಅ</th><th>ಯೋ.ಅ</th><th>ಒಟ್ಟು</th></tr>
<tr><td>ಪ.ಜಾ</td><td>09</td><td>03</td><td>01</td><td>01</td><td>01</td><td>15</td></tr>
<tr><td>ಪ.ಪಂ</td><td>02</td><td>01</td><td>–</td><td>–</td><td>–</td><td>03</td></tr>
<tr><td>ಪ್ರ.1</td><td>03</td><td>01</td><td>–</td><td>–</td><td>–</td><td>04</td></tr>
<tr><td>ಪ್ರ.2(ಎ)</td><td>09</td><td>04</td><td>01</td><td>01</td><td>01</td><td>16</td></tr>
<tr><td>ಪ್ರ.2(ಬಿ)</td><td>04</td><td>01</td><td>–</td><td>–</td><td>–</td><td>05</td></tr>
<tr><td>ಪ್ರ.3(ಎ)</td><td>03</td><td>01</td><td>–</td><td>–</td><td>–</td><td>04</td></tr>
<tr><td>ಪ್ರ.3(ಬಿ)</td><td>03</td><td>02</td><td>–</td><td>–</td><td>–</td><td>05</td></tr>
<tr><td>ಸಾ.ಅ</td><td>28</td><td>14</td><td>05</td><td>02</td><td>02</td><td>51</td></tr>
<tr><td>ಒಟ್ಟು</td><td>61</td><td>27</td><td>07</td><td>04</td><td>04</td><td>103</td></tr>
</table>
ಮಹಿಳಾ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಬೇಕು.
</td>
</tr>
</table>

<table>
<tr><th>(1)</th><th>(2)</th><th>(3)</th><th>(4)</th><th>(5)</th><th>(6)</th><th>(7)</th></tr>
<tr>
<td>651–703</td>
<td>09</td>
<td>ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ನಿಲಯ ವಾರ್ಡನ್ (ಬಾಲಕರು) (ಬಾಲಕಿಯರು) 53 ಹುದ್ದೆಗಳು<br>ST Welfare Dept- Hostel Warden -(Boys) (Girls) 53 posts</td>
<td>ರೂ. 7275–13350</td>
<td>Must be a holder of a degree with degree in education.</td>
<td>ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ } 38<br>ಪ.ಜಾ, ಪ.ಪಂ, ಪ್ರ–1 } 40</td>
<td>
<u>ವಾರ್ಡನ್ (ಬಾಲಕ) (ಬಾಲಕಿಯರು)–53</u>
<table>
<tr><th>ಮೀಸಲಾತಿ</th><th>ಇ</th><th>ಮ</th><th>ಗ್ರಾ</th><th>ಮಾಸೈ</th><th>ಯೋ.ಅ</th><th>ಅಂ.ವಿ</th><th>ಕಮಾ.ಅ</th><th>ಒಟ್ಟು</th></tr>
<tr><td>ಪ.ಜಾ</td><td>02</td><td>03</td><td>03</td><td>–</td><td>–</td><td>01*</td><td>–</td><td>09</td></tr>
<tr><td>ಪ.ಪಂ</td><td>01</td><td>01</td><td>–</td><td>–</td><td>–</td><td>–</td><td>–</td><td>02</td></tr>
<tr><td>ಪ್ರ.1</td><td>01</td><td>01</td><td>–</td><td>–</td><td>–</td><td>–</td><td>–</td><td>02</td></tr>
<tr><td>ಪ್ರ.2(ಎ)</td><td>02</td><td>03</td><td>02</td><td>–</td><td>–</td><td>01*</td><td>–</td><td>08</td></tr>
<tr><td>ಪ್ರ.2(ಬಿ)</td><td>01</td><td>01</td><td>–</td><td>–</td><td>–</td><td>–</td><td>–</td><td>02</td></tr>
<tr><td>ಪ್ರ.3(ಎ)</td><td>01</td><td>01</td><td>–</td><td>–</td><td>–</td><td>–</td><td>–</td><td>02</td></tr>
<tr><td>ಪ್ರ.3(ಬಿ)</td><td>01</td><td>01</td><td>–</td><td>–</td><td>–</td><td>–</td><td>–</td><td>02</td></tr>
<tr><td>ಸಾ.ಅ</td><td>05</td><td>08</td><td>07</td><td>02</td><td>01</td><td>02*</td><td>01</td><td>26</td></tr>
<tr><td>ಒಟ್ಟು</td><td>14</td><td>19</td><td>12</td><td>02</td><td>01</td><td>04</td><td>01</td><td>53</td></tr>
<tr><td colspan="9">* ಅಂಗವಿಕಲ ಅಭ್ಯರ್ಥಿಗಳಿಗೆ 04 ಹುದ್ದೆಗಳನ್ನು ಮೀಸಲಿರಿಸಿದ್ದು, ಈ ಹುದ್ದೆಗೆ ಕುಷ್ಠರೋಗದಿಂದ ಗುಣಮುಖರಾದವರು, ಶ್ರವಣದೋಷವುಳ್ಳವರು, ಚಲನವಲನ ವೈಕಲ್ಯ, ಮತ್ತು ಮಾನಸಿಕ ಅಸ್ವಸ್ಥ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರಿರುತ್ತಾರೆ.</td></tr>
</table>
</td>
</tr>
<tr>
<td>704–726</td>
<td>10</td>
<td>ನಗರಾಭಿವೃದ್ಧಿ ಇಲಾಖೆಯಲ್ಲಿ ಮುಖ್ಯಾಧಿಕಾರಿ ಶ್ರೇಣಿ–II (ಕೆ.ಎಂ.ಎ.ಎಸ್) ವೃಂದದ 23 ಹುದ್ದೆಗಳು<br>Chief Officer Gr-II (KMAS) - 23 posts</td>
<td>ರೂ. 8825–16000</td>
<td>A degree of a University established by law in India.</td>
<td>– ಅದೇ –</td>
<td>
<table>
<tr><th>ಮೀಸಲಾತಿ</th><th>ಇತರೆ</th><th>ಮಹಿಳೆ</th><th>ಗ್ರಾಮೀಣ</th><th>ಮಾ.ಸೈ</th><th>ಅಂ.ವಿ</th><th>ಒಟ್ಟು</th></tr>
<tr><td>ಪ.ಜಾ</td><td>01</td><td>01</td><td>01</td><td>–</td><td>01</td><td>04</td></tr>
<tr><td>ಪ.ಪಂ</td><td>01</td><td>–</td><td>–</td><td>–</td><td>–</td><td>01</td></tr>
<tr><td>ಪ್ರ.1</td><td>01</td><td>–</td><td>–</td><td>–</td><td>–</td><td>01</td></tr>
<tr><td>ಪ್ರ.2(ಎ)</td><td>01</td><td>01</td><td>01</td><td>–</td><td>–</td><td>03</td></tr>
<tr><td>ಪ್ರ.2(ಬಿ)</td><td>01</td><td>–</td><td>–</td><td>–</td><td>–</td><td>01</td></tr>
<tr><td>ಪ್ರ.3(ಎ)</td><td>01</td><td>–</td><td>–</td><td>–</td><td>–</td><td>01</td></tr>
<tr><td>ಪ್ರ.3(ಬಿ)</td><td>01</td><td>–</td><td>–</td><td>–</td><td>–</td><td>01</td></tr>
<tr><td>ಸಾ.ಅ</td><td>03</td><td>03</td><td>03</td><td>01</td><td>01</td><td>11</td></tr>
<tr><td>ಒಟ್ಟು</td><td>10</td><td>05</td><td>05</td><td>01</td><td>02</td><td>23</td></tr>
</table>
ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಿದ್ದ 02 ಹುದ್ದೆಗಳು ಶ್ರವಣದೋಷ ಅಭ್ಯರ್ಥಿಗಳಿಗಾಗಿ ಮೀಸಲಿಡಲಾಗಿದೆ.
</td>
</tr>
</table>

| (1) | (2) | (3) | (4) | (5) | (6) | (7) |
|---|---|---|---|---|---|---|
| 727 | 11 | ಆಡಳಿತ ತರಬೇತಿ ಸಂಸ್ಥೆ (ಮೈಸೂರು) ಯಲ್ಲಿ ಗ್ರಂಥಾಲಯ ಸಹಾಯಕರ 01 ಹುದ್ದೆ Library Assistant – 01 post | ರೂ. 5800– 10500 | 1) Should be a holder of a Certificate in Library Science awarded by the Government Library Training School, Bangalore or equivalent qualification 2) Should have not less than one year's experience in a Library recognized by the Government. | ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ – 38<br>ಪ.ಜಾ, ಪ.ಪಂ, ಪ್ರ–1 – 40 | ಸಾಮಾನ್ಯ ಅರ್ಹತೆ (ಇತರೆ) – 01 ಹುದ್ದೆ |

ಮಹಿಳೆಯರಿಗೆ / ಮಾಜಿ ಸೈನಿಕರಿಗೆ / ಗ್ರಾಮೀಣ / ಯೋಜನೆ ನಿರ್ವಸಿತ ಅಭ್ಯರ್ಥಿಗಳಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಸಂಕ್ಷೇಪ:– ಇ – ಇತರೆ / ಮ – ಮಹಿಳೆ / ಗ್ರಾ – ಗ್ರಾಮೀಣ / ಮಾ.ಸೈ – ಮಾಜಿ ಸೈನಿಕ / ಕ..ಮಾ.ಅ. – ಕನ್ನಡ ಮಾಧ್ಯಮದ ಅಭ್ಯರ್ಥಿ/ ಪ.ಜಾ – ಪರಿಶಿಷ್ಟ ಜಾತಿ / ಪ.ಪಂ. – ಪರಿಶಿಷ್ಟ ಪಂಗಡ / ಪ್ರ.–ಪ್ರವರ್ಗ / ಸಾ.ಅ.–ಸಾಮಾನ್ಯ ಅರ್ಹತೆ / ಅಂ.ವಿ–ಅಂಗ ವಿಕಲ/ಯೋ.ಅ–ಯೋಜನಾ ನಿರಾಶ್ರಿತರು.

ವಿ.ಬಿ. ಪಾಟೀಲ್
ಕಾರ್ಯದರ್ಶಿ,
ಕರ್ನಾಟಕ ಲೋಕ ಸೇವಾ ಆಯೋಗ

ಪಿ.ಆರ್. 526

## ಸಹಾಯಕ ನಿರ್ದೇಶಕರು, ಪಶು ಪಾಲನಾ ಮತ್ತು ಪಶು ವೈದ್ಯ ಸೇವಾ ಇಲಾಖೆ, ಚನ್ನಗಿರಿ

### ಹರಾಜು ಪ್ರಕಟಣೆ

**ಸಂಖ್ಯೆ: ಸ.ನಿ.ಕ/ ಪ ಪಾ.ಇ.ಚ/ವಾ.ಬ.ಹ.ಪ್ರ./2009–10, ದಿನಾಂಕ: 25ನೇ ಜೂನ್ 2009**

ಈ ಮೂಲಕ ಸಾರ್ವಜನಿಕರ ಮಾಹಿತಿಗಾಗಿ ಪ್ರಚಾರಪಡಿಸುವುದೇನೆಂದರೆ, ಸಹಾಯಕ ನಿರ್ದೇಶಕರು, ಪಶುಪಾಲನಾ ಮತ್ತು ಪಶು ವೈದ್ಯ ಸೇವಾ ಇಲಾಖೆ, ಚನ್ನಗಿರಿ ಈ ಕಚೇರಿಯ ವಾಹನವನ್ನು ಬಹಿರಂಗ ಹರಾಜು ಮೂಲಕ ದಿನಾಂಕ:26.08.2009ರಂದು ಮಧ್ಯಾಹ್ನ 12.30ಕ್ಕೆ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳವರು ಈ ಕೆಳಗೆ ನಮೂದಿಸಿರುವ ನಿಬಂಧನೆಗಳಿಗೆ ಒಳಪಟ್ಟು, ಹರಾಜಿನಲ್ಲಿ ಭಾಗವಹಿಸಬಹುದು.

ಹರಾಜಿಗೆ ಒಳಪಡುವ ವಾಹನದ ವಿವರ ಈ ಕೆಳಕಂಡಂತಿದೆ.

| ಕ್ರ. ಸಂ. | ವಾಹನದ ವಿವರ | ವಾಹನದ ಮಾದರಿ | ನೊಂದಣಿ ಸಂಖ್ಯೆ | ವಾಹನ ಇರುವ ಸ್ಥಳ |
|---|---|---|---|---|
| 1. | ಜೀಪು (ಮಹೀಂದ್ರ) | 1991 | ಕೆ.ಎ.14 ಜಿ.94 | ಸಹಾಯಕ ನಿರ್ದೇಕರ ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಪಶು ಆಸ್ಪತ್ರೆ, ಚನ್ನಗಿರಿ |

**ನಿಬಂಧನೆಗಳು**

1. ಹರಾಜಿನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು, ಹರಾಜಿನ ಮೊದಲು ರೂ.5000/– ಠೇವಣಿ ಇಡಬೇಕು. ಈ ಹಣವನ್ನು ಹರಾಜು ಪೂರೈಸಿದ ನಂತರ ಅಂಗೀಕೃತ ಬಿಡ್ಡುದಾರರ ಹೊರತುಪಡಿಸಿ, ಉಳಿದವರಿಗೆ ಹಿಂತಿರುಗಿಸಲಾಗುವುದು.
2. ಹರಾಜು ನಡೆಸುವ ಅಧಿಕಾರಿಯವರು ಯಾವುದೇ ಸಂದರ್ಭದಲ್ಲಿ, ಯಾವುದೇ ಕಾರಣ ನೀಡದೆ ಹರಾಜನ್ನು ನಡೆಸುವ ಅಥವಾ ತಿರಸ್ಕರಿಸುವ ಅಧಿಕಾರ ಹೊಂದಿರುತ್ತಾರೆ.
3. ಠೇವಣಿ ತುಂಬಿದ ಬಿಡ್ಡುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಬಹುದು.
4. ಯಶಸ್ವಿ ಬಿಡ್ಡುದಾರರು ಹರಾಜಿನ ಪೂರ್ತಿ ಮೊತ್ತವನ್ನು, ತೆರಿಗೆ ಸಹಿತ, ತಕ್ಷಣವೆ ಪಾವತಿಸಿ ರಶೀದಿ ಪಡೆಯತಕ್ಕದ್ದು. ತಪ್ಪಿದಲ್ಲಿ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ, ನಷ್ಟದ ಮೊಬಲಗನ್ನು ಯಶಸ್ವಿ ಹರಾಜುದಾರರಿಂದಲೇ, ರೆವಿನ್ಯೂ ಬಾಕಿ ಎಂದು ಪರಿಗಣಿಸಿ, ವಸೂಲಿ ಮಾಡಲಾಗುವುದು, ಲಾಭವೇನಾದರೂ ಬಂದಲ್ಲಿ ಅದಕ್ಕೆ ಅವರು ಹಕ್ಕುದಾರರಲ್ಲ.
5. ವಾಹನಗಳು ಎಲ್ಲಿವೆಯೋ–ಹೇಗಿವೆಯೋ ಹಾಗೆಯೇ, ಈಗಿರುವ ಸ್ಥಳದಲ್ಲೇ ಹರಾಜು ಮಾಡಲಾಗುವುದು. ಯಾವುದೇ ಕಾರಣಕ್ಕೂ ಸ್ಕ್ರಾಪ್ ಅಥವಾ ಬಿಡಿ ಭಾಗ ಎಂದಾಗಲಿ ಪರಿಗಣಿಸುವುದಿಲ್ಲ.
6. ಇಚ್ಛೆಯುಳ್ಳ ಹರಾಜುದಾರರು, ಹರಾಜಿಗಿರುವ ವಾಹನವನ್ನು ಯಥಾಸ್ಥಿತಿಯಲ್ಲಿ ಸಹಾಯಕ ನಿರ್ದೇಶಕರ ಕಛೇರಿ, ಪಶು ಪಾಲನಾ ಮತ್ತು ಪಶು ವೈದ್ಯ ಸೇವಾ ಇಲಾಖೆ, ಪಶು ಆಸ್ಪತ್ರೆ, ಚನ್ನಗಿರಿಯಲ್ಲಿ ಬೆಳಿಗ್ಗೆ: 9.00 ರಿಂದ 4.30 ರವರೆಗೆ ಪರಿಶೀಲಿಸಬಹುದು.

   ಹೆಚ್ಚಿನ ಮಾಹಿತಿಗಾಗಿ ಸಹಾಯಕ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯ ಸೇವಾ ಇಲಾಖೆ, ಪಶು ಆಸ್ಪತ್ರೆ, ಚನ್ನಗಿರಿ ಇವರನ್ನು ಖುದ್ದಾಗಿ ಸಂಪರ್ಕಿಸಬಹುದು.
8. ಕೇಂದ್ರ ಮತ್ತು ರಾಜ್ಯ ಸರ್ಕಾರಿ ಕಚೇರಿಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ನೌಕರರು ಹರಾಜಿನಲ್ಲಿ ಭಾಗವಹಿಸುವಂತಿಲ್ಲ.

ಸಹಾಯಕ ನಿರ್ದೇಶಕರು,

ಪಿ.ಆರ್. 514 ಪಶು ಪಾಲನಾ ಮತ್ತು ಪಶು ವೈದ್ಯ ಸೇವಾ ಇಲಾಖೆ, ಪಶು ಆಸ್ಪತ್ರೆ, ಚನ್ನಗಿರಿ.

## OFFICE OF THE ADVOCATE-GENERAL FOR KARNATAKA, HIGH COURT BUILDINGS, BANGALORE – 560 001

### CORRIGENDUM

**No. 51/AG/EST/2008-09, Dated: 1st July 2009**

In this Office Notification No.267/AG/EST/2008-09 dated 20.03.2009 published in the Official Gazette dated 28.05.2009 read with this Office Corrigendum dated 15.06.2009 published in the Official Gazette dated 25.06.2009, the last date was fixed for receiving the Applications for the Posts of Stenograhers and Typists as 30.06.2009. However, in view of the public interest, the last date has been extended from 30.06.2009 to **29.07.2009** for receiving the Applications for the said Posts.

By Order of the Advocate General

P.R. 527

**M. KRISHNAPPA**

Administrative Officer

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ತುಮಕೂರು ವಿಭಾಗ, ತುಮಕೂರು**

**ತುಮಕೂರು ಅರಣ್ಯ ವಿಭಾಗದ ವಿವಿಧ ಅರಣ್ಯ ವಲಯ ವ್ಯಾಪ್ತಿಗೆ ಒಳಪಡುವ ವಿವಿಧ ಅರಣ್ಯ ಉತ್ಪನ್ನಗಳ ಎತ್ತುವಳಿ ಗುತ್ತಿಗೆ ಬಗ್ಗೆ 2009–11ನೇ ಸಾಲಿನ ಟೆಂಡರ್–ಕಂ–ಹರಾಜು ಪ್ರಕಟಣೆ**

**ಸಂಖ್ಯೆ:ಎ8:ಸೇಲ್ಸ್:ಟೆಂಡರು–ಕಂ–ಹರಾಜು–ವಿವ–03/09–10, ದಿನಾಂಕ: 19ನೇ ಜೂನ್ 2009**

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2009–11ನೇ ಸಾಲಿಗೆ (1–7–2009 ರಿಂದ 30–6–2011 ರವರೆಗೆ) ತುಮಕೂರು ಅರಣ್ಯ ವಿಭಾಗದಲ್ಲಿ ಮೆ:ಕೆಎಫ್‌ಡಿಸಿ, ಬೆಂಗಳೂರುರವರಿಗೆ ಹಸ್ತಾಂತರಿಸಿರುವ ಅರಣ್ಯ ಪ್ರದೇಶ, ಅರಣ್ಯ ಸಂಶೋಧನಾ ವಲಯಕ್ಕೆ ಹಸ್ತಾಂತರಿಸಿರುವ ಪ್ರದೇಶ ಮತ್ತು ಗ್ರಾಮ ಅರಣ್ಯ ಸಮಿತಿಗಳಿಗೆ ಸೇರ್ಪಡೆಯಾಗಿರುವ ಅರಣ್ಯ ಪ್ರದೇಶಗಳನ್ನು ಹೊರತುಪಡಿಸಿ ಅರಣ್ಯೋತ್ಪನ್ನಗಳಾದ ಹುಣಸೆ, ಮರಡಿಬೀಜ, ತೂಪ್ರಎಲೆ, ಸೀತಾಫಲ ಮತ್ತು ಕಿರು ಅರಣ್ಯ ಉತ್ಪನ್ನಗಳ ಎತ್ತುವಳಿ ಗುತ್ತಿಗೆಯನ್ನು ಒಪ್ಪಂದವಾದ ದಿನಾಂಕದಿಂದ 30.06.2011 ರವರೆಗೆ ರೂಢಿಸಿಕೊಳ್ಳುವ ಷರತ್ತಿಗೊಳಪಟ್ಟು ಟೆಂಡರು–ಕಂ–ಹರಾಜನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಇವರಾಗಲೀ ಅಥವಾ ಈ ಸಂಬಂಧವಾಗಿ ಅಧಿಕಾರ ಪಡೆದ ಇತರೆ ಅಧಿಕಾರಿಯಿಂದಾಗಲೀ ಈ ಕೆಳಗೆ ನಮೂದಿಸಿದ ದಿನಾಂಕ ಹಾಗೂ ಸಮಯದಂದು ಸಂಪೂರ್ಣ ಹರಾಜು ಇಸ್ತಿಹಾರಿನ ಷರತ್ತುಗಳಿಗನುಸಾರವಾಗಿ ನಡೆಸಲಾಗುವುದು.

| ಕ್ರ. ಸಂ. | ಅರಣ್ಯೋತ್ಪನ್ನಗಳ ಹೆಸರು | ಹರಾಜಿನ ದಿನಾಂಕ | ಮರು ಹರಾಜಿನ ದಿನಾಂಕ (ಷರತ್ತು ಸಂಖ್ಯೆ 12 ರಂತೆ) |
|---|---|---|---|
| 1) | ಕಿರು ಅರಣ್ಯ ಉತ್ಪನ್ನ | 21.07.2009 | 28.07.2009 |
| 2) | ಹುಣಸೆ ಫಸಲು | 21.07.2009 | 28.07.2009 |
| 3) | ಮರಡಿಬೀಜ | 21.07.2009 | 28.07.2009 |
| 4) | ತೂಪ್ರಎಲೆ | 21.07.2009 | 28.07.2009 |
| 5) | ಸೀತಾಫಲ | 21.07.2009 | 28.07.2009 |

**ವಿವರ**

| | | |
|---|---|---|
| 1) | ಟೆಂಡರ್ ಅರ್ಜಿ ಮಾರಾಟ | ಹರಾಜಿನ ದಿನಾಂಕದಂದು ಬೆಳಿಗ್ಗೆ 10.00 ಗಂಟೆಯಿಂದ ಮಧ್ಯಾಹ್ನ 1.00 ಗಂಟೆವರೆಗೆ ಹರಾಜಿನ ದಿನಾಂಕದಂದು ಮಧ್ಯಾಹ್ನ 3.00 ಗಂಟೆಯವರೆಗೆ |
| 2) | ಟೆಂಡರ್ ಅರ್ಜಿಯನ್ನು ಬಾಕ್ಸ್ ಒಳಗಡೆ ಹಾಕುವ ಸಮಯ | ಹರಾಜಿನ ದಿನಾಂಕದಂದು ಮಧ್ಯಾಹ್ನ 3.00 ಗಂಟೆಯವರೆಗೆ |
| 3) | ಹರಾಜು ಮಾಡುವ ಹಾಗೂ ಟೆಂಡರ್‌ನ್ನು ತೆಗೆಯುವ ದಿನಾಂಕ/ಸಮಯ | ಹರಾಜಿನ ದಿನಾಂಕದಂದು ಮಧ್ಯಾಹ್ನ 4.00 ಗಂಟೆಗೆ ಹರಾಜು ನಡೆದ ನಂತರ ಟೆಂಡರ್ ಬಾಕ್ಸ್ ತೆರೆಯಲಾಗುವುದು. |

**ಟೆಂಡರ್–ಕಂ–ಹರಾಜಿಗೆ ಒಳಪಡುವ ವಲಯಗಳ ಹೆಸರು**

| | | |
|---|---|---|
| 1) | ಸೀತಾಫಲ | ಪಾವಗಡ ತಾಲ್ಲೂಕು |
| 2) | ಕಿರು ಅರಣ್ಯ ಉತ್ಪನ್ನಗಳು | ವಿಭಾಗದ ಎಲ್ಲಾ ತಾಲ್ಲೂಕುಗಳು |
| 3) | ಹುಣಸೆ ಫಸಲು | ವಿಭಾಗದ ಎಲ್ಲಾ ತಾಲ್ಲೂಕುಗಳು |
| 4) | ಮರಡಿಬೀಜ | ಶಿರಾ ಹಾಗೂ ಗುಬ್ಬಿ ತಾಲ್ಲೂಕುಗಳು |
| 5) | ತೂಪ್ರಎಲೆ | ವಿಭಾಗದ ಎಲ್ಲಾ ತಾಲ್ಲೂಕುಗಳು |

**ಷರತ್ತುಗಳು**

1) ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗರವರ ಹೆಸರಿಗೆ ರೂ.1000–00 ಮೊಬಲಗಿಗೆ ಡಿ.ಡಿ.ಯನ್ನು ಯಾವುದೇ ಅಧಿಕೃತ ಬ್ಯಾಂಕ್‌ನಿಂದ ಪಡೆದು ಸಲ್ಲಿಸುವುದು. ಪ್ರತೀ ತಾಲ್ಲೂಕು ಹಾಗೂ ಪ್ರತೀ ಅರಣ್ಯ ಉತ್ಪನ್ನಕ್ಕೆ ಪ್ರತ್ಯೇಕವಾದ ಡಿ.ಡಿ.ಯನ್ನು ಸಲ್ಲಿಸುವುದು.
2) ಟೆಂಡರ್ ಹಾಗೂ ಹರಾಜನ್ನು ತಿರಸ್ಕರಿಸುವ ಅಧಿಕಾರವನ್ನು ಕಾಯ್ದಿರಿಸಲಾಗಿದೆ.
3) ಹರಾಜು ನಡೆಸುವ ಅಧಿಕಾರಿಗಳು ಇಚ್ಛಿಸುವ ರೀತಿಯಲ್ಲಿ ಅಗತ್ಯಬಿದ್ದಲ್ಲಿ ಯೂನಿಟ್‌ವಾರು ಅಥವಾ ಎಲ್ಲಾ ಯೂನಿಟ್‌ಗಳನ್ನು ಸೇರಿಸಿ ಒಟ್ಟಾಗಿ ಹರಾಜು ಮಾಡುವ ಅಧಿಕಾರವನ್ನು ಪಡೆದಿರುತ್ತಾರೆ.
4) ಸಾಧಾರಣವಾಗಿ ಒಂದಕ್ಕಿಂತ ಹೆಚ್ಚಾಗಿ ಟೆಂಡರ್‌ಗಳನ್ನು ಯಾವುದೇ ಗುತ್ತಿಗೆದಾರರು ಹಾಕುವಂತಿಲ್ಲ. ಒಂದು ವೇಳೆ ಹಾಕಿದ್ದಲ್ಲಿ ಅತಿ ಹೆಚ್ಚಿನ ಟೆಂಡರ್ ಮೊಬಲಗನ್ನು ಪರಿಗಣಿಸಿ ಉಳಿದವುಗಳನ್ನು ತಿರಸ್ಕರಿಸಲಾಗುವುದು.

5) ಸೀಲಾದ ಲಕೋಟೆಯ ಮೇಲೆ 2009–11ನೇ ಸಾಲಿಗೆ ತುಮಕೂರು ಅರಣ್ಯ ವಿಭಾಗದಲ್ಲಿ ಅರಣ್ಯ ಉತ್ಪನ್ನಗಳನ್ನು ರೂಢಿಸುವ ಬಾಬ್ತಿನ ಟೆಂಡರ್ ಎಂಬುದಾಗಿ ನಮೂದಿಸತಕ್ಕದ್ದು. ಹಾಗೂ ಯಾವ ಅರಣ್ಯ ಉತ್ಪನ್ನಕ್ಕೆ ಸಂಬಂಧಿಸಿದ ಟೆಂಡರು ಎಂಬುದಾಗಿ ಪ್ರತ್ಯೇಕವಾಗಿ ಬರೆಯಬೇಕು.
6) ಹರಾಜು ಅಥವಾ ಟೆಂಡರ್ ಯಾರ ಹೆಸರಿಗೆ ಆಗುತ್ತದೆಯೋ ಅವರು ಹರಾಜಿನ ಪೂರ್ಣ ಮೊತ್ತ ಹಾಗೂ ಪೂರ್ಣ ತೆರಿಗೆಗಳನ್ನು ಸ್ಥಳದಲ್ಲಿಯೇ ಪಾವತಿಸುವುದು. ತಪ್ಪಿದಲ್ಲಿ ಇಎಂಡಿಯನ್ನು ಮುಟ್ಟುಗೋಲು ಹಾಕಿಕೊಂಡು ಮರು ಹರಾಜು ಮಾಡಲಾಗುವುದು. ಸರ್ಕಾರಕ್ಕೆ ನಷ್ಟ ಉಂಟಾದಲ್ಲಿ ಮೂಲ ಬಿಡ್ಡುದಾರರು ಜವಾಬ್ದಾರರಾಗಿರುತ್ತಾರೆ.
7) ಈ ವಿಭಾಗದ ನೊಂದಾಯಿತ ಗುತ್ತಿಗೆದಾರರು ಮಾತ್ರ ಟೆಂಡರ್ ಹಾಕಲು ಅರ್ಹರಾಗಿರುತ್ತಾರೆ. ಹರಾಜಿನಲ್ಲಿ ಭಾಗವಹಿಸುವವರು ಯಶಸ್ವಿ ಬಿಡ್ಡುದಾರರಾಗಿ ನೊಂದಾಯಿತ ಗುತ್ತಿಗೆದಾರರಲ್ಲದಿದ್ದಲ್ಲಿ ನಿಯಮಾನುಸಾರ ದಾಖಲೆಗಳನ್ನು ಒದಗಿಸಿ ಕರಾರು ಮಾಡಿಸಿಕೊಳ್ಳುವುದು.
8) ಈ ಹಿಂದೆ ಅನರ್ಹರಾಗಿರುವ ಅರಣ್ಯ ಗುತ್ತಿಗೆದಾರರು ಅಥವಾ ದಿವಾಳಿಯಾಗಿರುವ ಅರಣ್ಯ ಗುತ್ತಿಗೆದಾರರು ಭಾಗವಹಿಸಲು ಅರ್ಹರಲ್ಲ.
9) ಹರಾಜಿನಲ್ಲಿ ತೆರಿಗೆಗಳ ಬಾಬ್ತು ರಿಯಾಯಿತಿ ಕೋರುವವರು ಸಂಬಂಧಿಸಿದ ಪ್ರಾಧಿಕಾರದಿಂದ ದೃಢೀಕರಣ ಪತ್ರ ಪಡೆದು ಹರಾಜಿನ ದಿನದಂದು ಹಾಜರುಪಡಿಸುವುದು.
10) ಯಶಸ್ವಿ ಬಿಡ್ಡುದಾರರು ಹರಾಜಿನ ದಿನಾಂಕದಂದು ಹರಾಜಿನ ಪೂರ್ಣ ಮೊತ್ತವನ್ನು ಪಾವತಿಸಿ ಕರಾರು ಪತ್ರ ಬರೆದುಕೊಟ್ಟು ಕಾರ್ಯಾದೇಶ ಪಡೆದ ನಂತರ ಅರಣ್ಯ ಉತ್ಪನ್ನದ ಎತ್ತುವಳಿ ಕಾರ್ಯ ಪ್ರಾರಂಭಿಸುವುದು. ತಪ್ಪಿದಲ್ಲಿ ನಿಯಮಾನುಸಾರ ಸೂಕ್ತಕ್ರಮ ತೆಗೆದುಕೊಳ್ಳಲಾಗುವುದು.
11) ಹೆಚ್ಚಿನ ವಿಷಯಗಳನ್ನು ತುಮಕೂರು ಅರಣ್ಯ ವಿಭಾಗ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.
12) ಟೆಂಡರು–ಕಂ–ಹರಾಜನ್ನು ಸಂಪೂರ್ಣವಾಗಿ ತಿರಸ್ಕರಿಸಿದಲ್ಲಿ ಅಥವಾ ಬಿಡ್ಡುದಾರರು ಭಾಗವಹಿಸದೇ ಇದ್ದಲ್ಲಿ ಮರು ಟೆಂಡರು–ಕಂ–ಹರಾಜನ್ನು ಕಾಲಂ ನಂ.4ರಲ್ಲಿ ನಮೂದಿಸಿದ ದಿನಾಂಕದಂದು ನಡೆಸಲಾಗುವುದು. ಹಾಗೂ ಮರು ಟೆಂಡರ್ ಕಂ ಹರಾಜಿಗೆ ಪುನಃ ಯಾವುದೇ ರೀತಿಯ ಪ್ರಕಟಣೆ ನೀಡಲಾಗುವುದಿಲ್ಲ.

ಪಿ.ಆರ್. 505 ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು.

## ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ, ಹಾಸನ
### ನೇಮಕಾತಿ ಪ್ರಕಟಣೆ
### ಅಧಿಸೂಚನೆ ಸಂಖ್ಯೆ 3/2009, ದಿನಾಂಕ 29ನೇ ಜೂನ್ 2009

**ವಿಷಯ:** ಬೆರಳಚ್ಚು–ನಕಲುಗಾರರು, ಪ್ರೋಸಸ್ ಸರ್ವರ್ ಹಾಗೂ ಜವಾನರ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ ಎಲ್‌ಎಡಬ್ಲ್ಯೂ 32 ಎಲ್‌ಸಿಇ 2008 ದಿನಾಂಕ 23–04–2008.
2) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರದ ಸಂಖ್ಯೆ ಎಲ್.ಸಿ.ಎ–11.205/2004 ದಿನಾಂಕ 17–06–2009.

ಮೇಲ್ಕಂಡ ಅಧಿಸೂಚನೆಯನ್ವಯ ಹಾಸನ ಜಿಲ್ಲಾ ನ್ಯಾಯಾಲಯ ಘಟಕದ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ 2 ಬೆರಳಚ್ಚು–ನಕಲುಗಾರರು, 5 ಪ್ರೋಸಸ್ ಸರ್ವರ್ ಹಾಗೂ 6 ಜವಾನರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿ ಪಡಿಸಿದ ಅರ್ಜಿ ನಮೂನೆಯ ಬೆರಳಚ್ಚು ಪ್ರತಿ/ಗಣಕೀಕೃತ ಪ್ರತಿಯಲ್ಲಿಯೇ ಅಭ್ಯರ್ಥಿಗಳು ತಮ್ಮ ಸ್ವಂತ ಕೈಬರಹದಿಂದ ಎಲ್ಲಾ ಅಂಕಣಗಳನ್ನು ಜಾಗರೂಕತೆಯಿಂದ ಭರ್ತಿ ಮಾಡಿ ದಿನಾಂಕ **03.08.2009** ರಂದು ಸಂಜೆ 5–00 ಗಂಟೆಯ ಒಳಗೆ ಸಲ್ಲಿಸತಕ್ಕದ್ದು.

**ಅರ್ಜಿಗಳನ್ನು ಸಲ್ಲಿಸಲು ನಿಗದಿ ಮಾಡಿದ ಕೊನೆಯ ದಿನಾಂಕ 03–08–2009 ಸಂಜೆ 5–00 ಗಂಟೆ.**

**I) ಬೆರಳಚ್ಚು – ನಕಲುಗಾರರು : (Typist Copyists)**

1) ಹುದ್ದೆಗಳ ಸಂಖ್ಯೆ : 2
2) ವೇತನ ಶ್ರೇಣಿ – 5800–100–6000–125–6500–150–7100–175–7800–200–8600–225–9500–250–10500 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು

**3) ಹುದ್ದೆಗಳ ವರ್ಗೀಕರಣ :**

| ವರ್ಗೀಕರಣ | ಇತರೆ | ಮಹಿಳಾ ಅಭ್ಯರ್ಥಿ | ಒಟ್ಟು |
|---|---|---|---|
| ಸಾಮಾನ್ಯ ಅಭ್ಯರ್ಥಿ | – | 1 | 1 |
| ಪ್ರವರ್ಗ – 3 ಎ | 1 | – | 1 |
| **ಒಟ್ಟು** | **1** | **1** | **2** |

**4) ಶೈಕ್ಷಣಿಕ ವಿದ್ಯಾರ್ಹತೆ:**

ಎ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಬಿ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕಿರಿಯ ದರ್ಜೆಯ (Junior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**5) ಅರ್ಹತಾ ಪರೀಕ್ಷೆ :**

ಅಭ್ಯರ್ಥಿಗೆ 15 ನಿಮಿಷಗಳ ಅವಧಿಯಂತೆ ಎರಡೂ ಭಾಷೆಗಳಲ್ಲಿ ಬೆರಳಚ್ಚು ಮಾಡಲು ಉಕ್ತಲೇಖನ ನೀಡಲಾಗುವುದು.

II) **<u>ಪ್ರೋಸಸ್ ಸರ್ವರ್ : (Process-Server)</u>**

1) ಹುದ್ದೆಗಳ ಸಂಖ್ಯೆ : 5

2) ವೇತನ ಶ್ರೇಣಿ – 5200–100–6000–125–6500–150–7100–175–7800–200–8200 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು

**3) ಹುದ್ದೆಗಳ ವರ್ಗೀಕರಣ :**

| ವರ್ಗೀಕರಣ | ಇತರೆ | ಗ್ರಾಮೀಣ | ಮಹಿಳಾ | ಒಟ್ಟು |
|---|---|---|---|---|
| ಸಾಮಾನ್ಯ ಅಭ್ಯರ್ಥಿ | 1 | 1 | 1 | 3 |
| ಪರಿಶಿಷ್ಟ ಜಾತಿ | – | 1 | – | 1 |
| ಪ್ರವರ್ಗ – 3ಎ | 1 | – | – | 1 |
| **ಒಟ್ಟು** | **2** | **2** | **1** | **5** |

**4) ಶೈಕ್ಷಣಿಕ ವಿದ್ಯಾರ್ಹತೆ :**

ಎ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಬಿ) ಡ್ರೈವಿಂಗ್ ಲೈಸೆನ್ಸ್ ಹೊಂದಿರುವವರಿಗೆ ಆದ್ಯತೆ ನೀಡಲಾಗುವುದು.

**5) ಅರ್ಹತಾ ಪರೀಕ್ಷೆ :**

ಎ) ಅಭ್ಯರ್ಥಿಗೆ ಕನ್ನಡದಲ್ಲಿ ಓದುವ ಹಾಗೂ ಬರೆಯುವ ಬಗ್ಗೆ ಪ್ರವೀಣತಾ ಪರೀಕ್ಷೆಯನ್ನು ನಡೆಸಲಾಗುವುದು.

**III)** **<u>ಜವಾನರು : (Peon)</u>**

1) ಹುದ್ದೆಗಳ ಸಂಖ್ಯೆ : 6

2) ವೇತನ ಶ್ರೇಣಿ – 4800–100–6000–125–6500–150–7100–175–7275 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು

**3) ಹುದ್ದೆಗಳ ವರ್ಗೀಕರಣ :**

| ವರ್ಗೀಕರಣ | **ಇತರೆ** | ಗ್ರಾಮೀಣ | ಮಹಿಳಾ | ಒಟ್ಟು |
|---|---|---|---|---|
| ಸಾಮಾನ್ಯ ಅಭ್ಯರ್ಥಿ | 1 | 1 | 1 | 3 |
| ಪರಿಶಿಷ್ಟ ಜಾತಿ | – | 1 | – | 1 |
| ಪ್ರವರ್ಗ – 1 | – | 1 | – | 1 |
| ಪ್ರವರ್ಗ – 2ಎ | – | – | 1 | 1 |
| **ಒಟ್ಟು** | **1** | **3** | **2** | **6** |

**4) ಶೈಕ್ಷಣಿಕ ವಿದ್ಯಾರ್ಹತೆ :**

ಎ) 7ನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು ಹಾಗೂ ಅರ್ಜಿಯ ಜೊತೆಯಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಮೇಲುಸಹಿ ಇರುವ ಅಂಕಪಟ್ಟಿಯ ಜೆರಾಕ್ಸ್ ಪ್ರತಿಯನ್ನು ಹಾಜರುಪಡಿಸತಕ್ಕದ್ದು.

ಬಿ) ಅಭ್ಯರ್ಥಿಗೆ ಕನ್ನಡದಲ್ಲಿ ಓದಲು ಹಾಗೂ ಬರೆಯಲು ತಿಳಿದಿರಬೇಕು.

**<u>ವಯೋಮಿತಿ ::</u>**

| | | | | |
|---|---|---|---|---|
| ಕನಿಷ್ಠ ವಯೋಮಿತಿ | :: | 18 ವರ್ಷ | | |
| ಗರಿಷ್ಠ ವಯೋಮಿತಿ | :: | ಸಾಮಾನ್ಯ ವರ್ಗ | – | 35 ವರ್ಷ |
| | | 2ಎ : 2ಬಿ : 3ಎ : 3ಬಿ | – | 38 ವರ್ಷ |
| | | ಪ.ಜಾ : ಪ.ಪಂ. : ಪ್ರ.ವರ್ಗ.1 | – | 40 ವರ್ಷ |

ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯವರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

**ಆಯ್ಕೆ ವಿಧಾನ ::**

ಕರ್ನಾಟಕ ಅಧೀನ ನ್ಯಾಯಾಲಯಗಳು (ಮಿನಿಸ್ಟ್ರಿಯಲ್ ಮತ್ತು ಇತರೆ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007 ರ ಅನ್ವಯ ನೇರ ನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು.

**ಪರಿವೀಕ್ಷಣಾ ಅವಧಿ ::**

ಆಯ್ಕೆಯಾದ ಅಭ್ಯರ್ಥಿಗಳನ್ನು ನೇಮಕಾತಿ ನಿಯಮಗಳಂತೆ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿಡಲಾಗುವುದು.

**ಪ್ರಮುಖವಾದ ಸೂಚನೆಗಳು ::**

ಅಭ್ಯರ್ಥಿಗಳು ಕೆಳಕಂಡ ಪ್ರಮಾಣ ಪತ್ರಗಳ ಒಂದೊಂದು ಛಾಯಾ ಪ್ರತಿ (ಫೋಟೋ ಕಾಪಿ/ಜೆರಾಕ್ಸ್) ಗಳನ್ನು ಸ್ವಯಂ–ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಬೇಕು. ಅರ್ಜಿಯೊಂದಿಗೆ ಮೂಲ ಪ್ರತಿ (ಒರಿಜಿನಲ್) ಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ.

1. ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ ಅಂಕಪಟ್ಟಿಗಳು ಹಾಗೂ ಪ್ರಮಾಣ ಪತ್ರಗಳು.
2. ಜನ್ಮ ದಿನಾಂಕವನ್ನು ನಮೂದಿಸಿರುವ ಎಲ್ಎಸ್ಎಲ್ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ ಃ ವರ್ಗಾವಣೆ ಪ್ರಮಾಣ ಪತ್ರ ಃ ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉಧೃತ ಭಾಗ.
3. ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–3ಎ ಹಾಗೂ ಪರಿಶಿಷ್ಟ ಜಾತಿ ಮೀಸಲಾತಿ ಪ್ರಮಾಣ ಪತ್ರಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ (ಮೀಸಲಾತಿ ಕೋರಿದ್ದಲ್ಲಿ)
4. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ (ಮೀಸಲಾತಿ ಕೋರಿದ್ದಲ್ಲಿ).
5. ಅಭ್ಯರ್ಥಿಯು ಕೊನೆಯಲ್ಲಿ ವಿದ್ಯಾಭ್ಯಾಸ ಮಾಡಿದ ಶಾಲಾ ಃ ಕಾಲೇಜಿನ ಮುಖ್ಯೋಪಾಧ್ಯಾಯರು ಃ ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ.
6. ಅಭ್ಯರ್ಥಿಯ ನಡತೆಯನ್ನು ದೃಢೀಕರಿಸುವ ಬಗ್ಗೆ ಅವನು ಓದಿರುವ ವಿದ್ಯಾಸಂಸ್ಥೆಗಳಿಗೆ ಸಂಬಂಧಪಡದ ಹಾಗೂ ಅಭ್ಯರ್ಥಿಯ ಸಂಬಂಧಿಗಳಲ್ಲದ ಇಬ್ಬರು ಸ್ಥಳೀಯ ಗಣ್ಯವ್ಯಕ್ತಿಗಳಿಂದ ಪಡೆದ 6 ತಿಂಗಳ ಈಚೆಗಿನ ಎರಡು ನಡತೆ ಪ್ರಮಾಣ ಪತ್ರಗಳು.

**ಇತರೆ ಸೂಚನೆಗಳು**

1. ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ಮೇಲಾಧಿಕಾರಿಗಳಿಂದ ಪಡೆದ ದೃಢೀಕರಣ ಹಾಗೂ ಅನುಮತಿ ಪ್ರಮಾಣ ಪತ್ರವನ್ನು ನೀಡತಕ್ಕದ್ದು.
2. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು
3. ಅರ್ಜಿಯೊಂದಿಗೆ 6 ರೂಪಾಯಿಯ ಅಂಚೆ ಮುದ್ರಾಂಕ (Postal Stamp) ವನ್ನು ಹೊಂದಿರುವ ಸ್ವ–ವಿಳಾಸದ ಲಕೋಟೆಯನ್ನು ಸಲ್ಲಿಸತಕ್ಕದ್ದು.
4. ಅರ್ಜಿಯೊಂದಿಗೆ ಅಭ್ಯರ್ಥಿಗಳು ತಮ್ಮ ಇತ್ತೀಚಿನ ಒಂದು ಭಾವಚಿತ್ರವನ್ನು ಸ್ವದೃಢೀಕರಿಸಿ ಲಗತ್ತಿಸಬೇಕು.
5. ಎಲ್ಲಾ ಅರ್ಹ ಅಭ್ಯರ್ಥಿಗಳಿಗೂ ಅರ್ಹತಾ–ಸ್ಪರ್ಧಾತ್ಮಕ ಪರೀಕ್ಷೆ ನಡೆಸಲಾಗುವುದು.
6. ಬೆರಳಚ್ಚು–ನಕಲುಗಾರರ ಹುದ್ದೆಗೆ ಅರ್ಹತೆಯ ಆಧಾರದ ಮೇಲೆ ಒಂದು ಹುದ್ದೆಗೆ 5 ಅಭ್ಯರ್ಥಿಗಳನ್ನು ಮಾತ್ರ ಸಂದರ್ಶನಕ್ಕೆ ಕರೆಯಲಾಗುವುದು.
7. ಪ್ರೋಸೆಸ್ ಸರ್ವರ್ ಹುದ್ದೆಗೆ ಎಸ್ಎಸ್ಎಲ್ಸಿ ಪರೀಕ್ಷೆಯಲ್ಲಿ ಪಡೆದ ಗರಿಷ್ಠ ಅಂಕಗಳ ಅರ್ಹತೆಯ ಆಧಾರದ ಮೇಲೆ ಒಂದು ಹುದ್ದೆಗೆ 25 ಅಭ್ಯರ್ಥಿಗಳನ್ನು ಮಾತ್ರ ಸಂದರ್ಶನಕ್ಕೆ ಕರೆಯಲಾಗುವುದು.
8. ಜವಾನರ ಹುದ್ದೆಗೆ 7ನೇ ತರಗತಿಯಲ್ಲಿ ಪಡೆದ ಗರಿಷ್ಠ ಅಂಕಗಳ ಅರ್ಹತೆಯ ಆಧಾರದ ಮೇಲೆ ಒಂದು ಹುದ್ದೆಗೆ 10 ಅಭ್ಯರ್ಥಿಗಳನ್ನು ಮಾತ್ರ ಸಂದರ್ಶನಕ್ಕೆ ಕರೆಯಲಾಗುವುದು.
9. ಸಂದರ್ಶನಕ್ಕೆ ಆಯ್ಕೆಯಾದ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿಯೇ ಸಂದರ್ಶನಕ್ಕೆ ಹಾಜರಾಗಬೇಕು ಹಾಗೂ ಸಂದರ್ಶನ ಪತ್ರ ಬರದಿರುವ ಅಭ್ಯರ್ಥಿಗಳು ಸಂದರ್ಶನಕ್ಕೆ ಅರ್ಹರಲ್ಲವೆಂದು ಭಾವಿಸಿಕೊಳ್ಳತಕ್ಕದ್ದು.
10. ಆಯ್ಕೆಯ ಸಂಬಂಧವಾಗಿ ಸಂದರ್ಶನಕ್ಕೆ ಅನರ್ಹರಾದ ಅಭ್ಯರ್ಥಿಗಳು ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸಲು ಆಸ್ಪದವಿರುವುದಿಲ್ಲ.

**ವಿಶೇಷ ಸೂಚನೆ ::**

ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ನಿಗದಿತ ಅರ್ಜಿ ನಮೂನೆಯ ಬೆರಳಚ್ಚು ಪ್ರತಿ : ಗಣಕೀಕೃತ ಪ್ರತಿಯಲ್ಲಿ ಎಲ್ಲಾ ಅಂಕಣಗಳನ್ನು ನಿಗದಿತ ಉತ್ತರಗಳಿಂದ ಭರ್ತಿ ಮಾಡಿರತಕ್ಕದ್ದು. ಸರಿಯಾಗಿ ಅಂಕಣಗಳನ್ನು ಭರ್ತಿ ಮಾಡದೇ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಕೆ. ಸೋಮಶೇಖರ್**

ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಹಾಸನ.

**ಅರ್ಜಿ ನಮೂನೆ**

**ಬೆರಳಚ್ಚು–ನಕಲುಗಾರರ ಹುದ್ದೆಗೆ ಅರ್ಜಿ**

ಗೆ ::

ಮಾನ್ಯ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು,
ಹಾಸನ.

| ಪಾಸ್ ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು |
|---|

ಮಾನ್ಯರೆ,

ತಮ್ಮ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ 3/2009, ದಿನಾಂಕ 29–06–2009 ರ ಪ್ರಕಟಣೆ ಮೇರೆಗೆ ನಾನು ಮಾಹಿತಿಗಳೊಂದಿಗೆ ಬೆರಳಚ್ಚು–ನಕಲುಗಾರರ ಹುದ್ದೆಗೆ ನನ್ನ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ.

| | | | | | |
|---|---|---|---|---|---|
| 1. | ಅಭ್ಯರ್ಥಿಯ ಹೆಸರು | | | | |
| 2. | ತಂದೆ / ತಾಯಿ / ಗಂಡನ ಹೆಸರು | | | | |
| 3. | ಪೂರ್ಣ ವಿಳಾಸ | | | | |
| 4. | ಹುಟ್ಟಿದ ದಿನಾಂಕ ಮತ್ತು ವಯಸ್ಸು | | | | |
| 5. | ಲಿಂಗ : ಗಂಡು / ಹೆಣ್ಣು | | | | |
| 6. | ರಾಷ್ಟ್ರೀಯತೆ<br>ಧರ್ಮ<br>ಜಾತಿ / ಉಪಜಾತಿ | | | | |
| 7. | ಪ.ಜಾ, ಪ.ಪಂ, ಪ್ರವರ್ಗ–1 ಪ್ರವರ್ಗ–2ಎ, 2ಬಿ, ಪ್ರವರ್ಗ–3ಎ, 3ಬಿ ಗುಂಪಿಗೆ ಸೇರಿದವರೇ ? | | | | |
| 8. | ಯಾವ ವರ್ಗ / ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುತ್ತಿದ್ದೀರಿ ?<br>(ಸಂಬಂಧಪಟ್ಟ ದಾಖಲಾತಿಗಳನ್ನು ಲಗತ್ತಿಸತಕ್ಕದ್ದು) | | | | |
| 9. | ತಂದೆ : ತಾಯಿ : ಗಂಡನ ಉದ್ಯೋಗ ಮತ್ತು ಕುಟುಂಬದ ವರಮಾನ | | | | |
| 10. | ವಿವಾಹಿತರೆ : ಅವಿವಾಹಿತರೇ ? | | | | |
| 11. | ಶೈಕ್ಷಣಿಕ ವಿದ್ಯಾರ್ಹತೆ<br>(ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | ಉತ್ತೀರ್ಣ ಹೊಂದಿದ ವರ್ಷ ಮತ್ತು ನೊಂದಣೆ ಸಂಖ್ಯೆ | ಗರಿಷ್ಠ ಅಂಕಗಳು | ಪಡೆದಿರುವ ಅಂಕಗಳು | ಶೇಕಡಾವಾರು ಅಂಕಗಳು |
| ಎ | ಎಸ್‌ಎಸ್‌ಎಲ್‌ಸಿ / ತತ್ಸಮಾನ ವಿದ್ಯಾರ್ಹತೆ | | | | |
| ಬಿ | ಕಿರಿಯ ದರ್ಜೆ ಆಂಗ್ಲ ಬೆರಳಚ್ಚು ಪರೀಕ್ಷೆ | | | | |
| ಸಿ | ಕಿರಿಯ ದರ್ಜೆ ಕನ್ನಡ ಬೆರಳಚ್ಚು ಪರೀಕ್ಷೆ | | | | |
| ಡಿ | ಗಣಕಯಂತ್ರ (ಕಂಪ್ಯೂಟರ್) ವಿದ್ಯಾಭ್ಯಾಸ<br>(ದಾಖಲಾತಿಗಳನ್ನು ಲಗತ್ತಿಸುವುದು) | | | | |

| | | |
|---|---|---|
| 12. | 11ನೇ ಕಾಲಂನಲ್ಲಿ ತೋರಿಸಿರುವುದಕ್ಕಿಂತ ಹೆಚ್ಚಿನ ವಿದ್ಯಾರ್ಹತೆ ಹೊಂದಿದ್ದರೆ ಆ ಬಗ್ಗೆ ವಿವರಣೆ. | |
| 13. | ಭಾರತೀಯ ನಾಗರೀಕರೆ (ಭಾರತೀಯ ನಾಗರೀಕರಾಗಿರದಿದ್ದಲ್ಲಿ ಸಂಬಂಧಪಟ್ಟ ದಾಖಲೆ ಹಾಜರುಪಡಿಸುವುದು) | |
| 14. | ತಂದೆ ಃ ತಾಯಿಃ ಬಂಧುಗಳುಃ ಪತ್ನಿಃ ಪತಿ ಃ ಸಹೋದರ ಃಸಹೋದರಿಯರು ಮತ್ತು ಇತರ ಹತ್ತಿರ ಸಂಬಂಧಿಗಳು ಸರ್ಕಾರಿ ನೌಕರರೇ? (ಸಂಬಂಧಪಟ್ಟ ದಾಖಲೆ ಹಾಜರುಪಡಿಸುವುದು). | |
| 15. | ಯಾವುದಾದರು ಅಪರಾಧದಲ್ಲಿ ಭಾಗಿಯಾಗಿರುವಿರೇ? | |

**ಸೂಚನೆಃ–** ಅಭ್ಯರ್ಥಿಗಳು ಎಲ್ಲಾ ಕಾಲಂಗಳನ್ನು ಕಡ್ಡಾಯವಾಗಿ ಭರ್ತಿ ಮಾಡತಕ್ಕದ್ದು.

ಈ ಮೇಲ್ಕಂಡ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯ ಮತ್ತು ಸರಿಯಾಗಿವೆಯೆಂದು ಪ್ರಮಾಣೀಕರಿಸುತ್ತೇನೆ ಮತ್ತು ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡುಬಂದಲ್ಲಿ ನನ್ನ ಅಭ್ಯರ್ಥಿತನವನ್ನು ರದ್ದುಪಡಿಸಬಹುದು ಎಂದು ಈ ಮೂಲಕ ಘೋಷಿಸುತ್ತೇನೆ.

ದಿನಾಂಕ ಃ

ಸ್ಥಳ ಃ

ಅಭ್ಯರ್ಥಿಯ ಸಹಿ.

**ಅರ್ಜಿ ನಮೂನೆ**

**ಪ್ರೋಸಸ್ ಸರ್ವರ್ ಹುದ್ದೆಗೆ ಅರ್ಜಿ**

ಗೆ ಃ

ಮಾನ್ಯ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು,

ಹಾಸನ.

ಪಾಸ್ ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು

ಮಾನ್ಯರೆ,

ತಮ್ಮ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ **3/2009**, ದಿನಾಂಕ **29–06–2009** ರ ಪ್ರಕಟಣೆ ಮೇರೆಗೆ ನಾನು ಮಾಹಿತಿಗಳೊಂದಿಗೆ ಪ್ರೋಸಸ್ ಸರ್ವರ್ ಹುದ್ದೆಗೆ ನನ್ನ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ.

| | | |
|---|---|---|
| 1. | ಅಭ್ಯರ್ಥಿಯ ಹೆಸರು | |
| 2. | ತಂದೆ / ತಾಯಿ / ಗಂಡನ ಹೆಸರು | |
| 3. | ಪೂರ್ಣ ವಿಳಾಸ | |
| 4. | ಹುಟ್ಟಿದ ದಿನಾಂಕ ಮತ್ತು ವಯಸ್ಸು | |
| 5. | ಲಿಂಗ ಃ ಗಂಡು / ಹೆಣ್ಣು | |
| 6. | ರಾಷ್ಟ್ರೀಯತೆ<br>ಧರ್ಮ<br>ಜಾತಿ / ಉಪಜಾತಿ | |
| 7. | ಪ್ರ.ಜಾ, ಪ.ಪಂ, ಪ್ರವರ್ಗ–1 ಪ್ರವರ್ಗ–2ಎ, 2ಬಿ, ಪ್ರವರ್ಗ–3ಎ, 3ಬಿ ಗುಂಪಿಗೆ ಸೇರಿದವರೇ ? | |
| 8. | ಯಾವ ವರ್ಗ / ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುತ್ತಿದ್ದೀರಿ ?<br>(ಸಂಬಂಧಪಟ್ಟ ದಾಖಲಾತಿಗಳನ್ನು ಲಗತ್ತಿಸತಕ್ಕದ್ದು) | |

| | | | | | |
|---|---|---|---|---|---|
| 9. | ತಂದೆ ः ತಾಯಿ ः ಗಂಡನ ಉದ್ಯೋಗ ಮತ್ತು ಕುಟುಂಬದ ವರಮಾನ | | | | |
| 10. | ವಿವಾಹಿತರೆ ः ಅವಿವಾಹಿತರೇ ? | | | | |
| 11. | ಶೈಕ್ಷಣಿಕ ವಿದ್ಯಾರ್ಹತೆ (ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | ಉತ್ತೀರ್ಣ ಹೊಂದಿದ ವರ್ಷ ಮತ್ತು ನೊಂದಣೆ ಸಂಖ್ಯೆ | ಗರಿಷ್ಟ ಅಂಕಗಳು | ಪಡೆದಿರುವ ಅಂಕಗಳು | ಶೇಕಡಾವಾರು ಅಂಕಗಳು |
| ಎ | ಎಸ್‌ಎಸ್‌ಎಲ್‌ಸಿ / ತತ್ಸಮಾನ ವಿದ್ಯಾರ್ಹತೆ | | | | |
| 12. | 11ನೇ ಕಾಲಂನಲ್ಲಿ ತೋರಿಸಿರುವುದಕ್ಕಿಂತ ಹೆಚ್ಚಿನ ವಿದ್ಯಾರ್ಹತೆ ಹೊಂದಿದ್ದರೆ ಆ ಬಗ್ಗೆ ವಿವರಣೆ. | | | | |
| 13. | ಭಾರತೀಯ ನಾಗರೀಕರೆ (ಭಾರತೀಯ ನಾಗರೀಕರಾಗಿರದಿದ್ದಲ್ಲಿ ಸಂಬಂಧಪಟ್ಟ ದಾಖಲೆ ಹಾಜರುಪಡಿಸುವುದು) | | | | |
| 14. | ತಂದೆ ः ತಾಯಿः ಬಂಧುಗಳುः ಪತ್ನಿः ಪತಿ ः ಸಹೋದರ ःಸಹೋದರಿಯರು ಮತ್ತು ಇತರ ಹತ್ತಿರ ಸಂಬಂಧಿಗಳು ಸರ್ಕಾರಿ ನೌಕರರೇ? (ಸಂಬಂಧಪಟ್ಟ ದಾಖಲೆ ಹಾಜರುಪಡಿಸುವುದು). | | | | |
| 15. | ಯಾವುದಾದರು ಅಪರಾಧದಲ್ಲಿ ಭಾಗಿಯಾಗಿರುವಿರೇ? | | | | |

**ಸೂಚನೆः–** ಅಭ್ಯರ್ಥಿಗಳು ಎಲ್ಲಾ ಕಾಲಂಗಳನ್ನು ಕಡ್ಡಾಯವಾಗಿ ಭರ್ತಿ ಮಾಡತಕ್ಕದ್ದು.

ಈ ಮೇಲ್ಕಂಡ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯ ಮತ್ತು ಸರಿಯಾಗಿವೆಯೆಂದು ಪ್ರಮಾಣೀಕರಿಸುತ್ತೇನೆ ಮತ್ತು ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡುಬಂದಲ್ಲಿ ನನ್ನ ಅಭ್ಯರ್ಥಿತನವನ್ನು ರದ್ದುಪಡಿಸಬಹುದು ಎಂದು ಈ ಮೂಲಕ ಘೋಷಿಸುತ್ತೇನೆ.

ದಿನಾಂಕ ः

ಸ್ಥಳ ः ಅಭ್ಯರ್ಥಿಯ ಸಹಿ.

**ಅರ್ಜಿ ನಮೂನೆ**

**ಜವಾನರ ಹುದ್ದೆಗೆ ಅರ್ಜಿ**

ಗೆ ः

ಮಾನ್ಯ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು,

ಹಾಸನ.

ಪಾಸ್ ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು

ಮಾನ್ಯರೆ,

ತಮ್ಮ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ **3/2009,** ದಿನಾಂಕ **29–06–2009** ರ ಪ್ರಕಟಣೆ ಮೇರೆಗೆ ನಾನು ಮಾಹಿತಿಗಳೊಂದಿಗೆ ಜವಾನರ ಹುದ್ದೆಗೆ ನನ್ನ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ.

| | | |
|---|---|---|
| 1. | ಅಭ್ಯರ್ಥಿಯ ಹೆಸರು | |
| 2. | ತಂದೆ / ತಾಯಿ / ಗಂಡನ ಹೆಸರು | |
| 3. | ಪೂರ್ಣ ವಿಳಾಸ | |
| 4. | ಹುಟ್ಟಿದ ದಿನಾಂಕ ಮತ್ತು ವಯಸ್ಸು | |
| 5. | ಲಿಂಗ ः ಗಂಡು / ಹೆಣ್ಣು | |

| | | | | | |
|---|---|---|---|---|---|
| 6. | ರಾಷ್ಟ್ರೀಯತೆ<br>ಧರ್ಮ<br>ಜಾತಿ / ಉಪಜಾತಿ | | | | |
| 7. | ಪ್ರ.ಜಾ, ಪ.ಪಂ, ಪ್ರವರ್ಗ–1 ಪ್ರವರ್ಗ–2ಎ, 2ಬಿ, ಪ್ರವರ್ಗ–3ಎ, 3ಬಿ ಗುಂಪಿಗೆ ಸೇರಿದವರೇ ? | | | | |
| 8. | ಯಾವ ವರ್ಗ / ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುತ್ತಿದ್ದೀರಿ ?<br>(ಸಂಬಂಧಪಟ್ಟ ದಾಖಲಾತಿಗಳನ್ನು ಲಗತ್ತಿಸತಕ್ಕದ್ದು) | | | | |
| 9. | ತಂದೆ ಃ ತಾಯಿ ಃ ಗಂಡನ ಉದ್ಯೋಗ ಮತ್ತು ಕುಟುಂಬದ ವರಮಾನ | | | | |
| 10. | ವಿವಾಹಿತರೆ ಃ ಅವಿವಾಹಿತರೇ ? | | | | |
| 11. | ಶೈಕ್ಷಣಿಕ ವಿದ್ಯಾರ್ಹತೆ<br>(ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | ಉತ್ತೀರ್ಣ ಹೊಂದಿದ ವರ್ಷ ಮತ್ತು ನೊಂದಣೆ ಸಂಖ್ಯೆ | ಗರಿಷ್ಠ ಅಂಕಗಳು | ಪಡೆದಿರುವ ಅಂಕಗಳು | ಶೇಕಡಾವಾರು ಅಂಕಗಳು |
| ಎ | 7ನೇ ತರಗತಿ | | | | |
| 12. | 11ನೇ ಕಾಲಂನಲ್ಲಿ ತೋರಿಸಿರುವುದಕ್ಕಿಂತ ಹೆಚ್ಚಿನ ವಿದ್ಯಾರ್ಹತೆ ಹೊಂದಿದ್ದರೆ ಆ ಬಗ್ಗೆ ವಿವರಣೆ. | | | | |
| 13. | ಭಾರತೀಯ ನಾಗರೀಕರೆ (ಭಾರತೀಯ ನಾಗರೀಕರಾಗಿರದಿದ್ದಲ್ಲಿ ಸಂಬಂಧಪಟ್ಟ ದಾಖಲೆ ಹಾಜರುಪಡಿಸುವುದು) | | | | |
| 14. | ತಂದೆ ಃ ತಾಯಿಃ ಬಂಧುಗಳುಃ ಪತ್ನಿಃ ಪತಿ ಃ ಸಹೋದರ ಃಸಹೋದರಿಯರು ಮತ್ತು ಇತರ ಹತ್ತಿರ ಸಂಬಂಧಿಗಳು ಸರ್ಕಾರಿ ನೌಕರರೇ? (ಸಂಬಂಧಪಟ್ಟ ದಾಖಲೆ ಹಾಜರುಪಡಿಸುವುದು). | | | | |
| 15. | ಯಾವುದಾದರು ಅಪರಾಧದಲ್ಲಿ ಭಾಗಿಯಾಗಿರುವಿರೇ? | | | | |

**ಸೂಚನೆಃ–**

1) ಅಭ್ಯರ್ಥಿಗಳು ಎಲ್ಲಾ ಕಾಲಂಗಳನ್ನು ಕಡ್ಡಾಯವಾಗಿ ಭರ್ತಿ ಮಾಡತಕ್ಕದ್ದು.
2) ಅರ್ಜಿಯ ಜೊತೆಯಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಮೇಲುಸಹಿ ಇರುವ 7ನೇ ತರಗತಿಯ ಅಂಕಪಟ್ಟಿಯ ಜೆರಾಕ್ಸ್ ಪ್ರತಿಯನ್ನೇ ಹಾಜರುಪಡಿಸತಕ್ಕದ್ದು.

ಈ ಮೇಲ್ಕಂಡ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯ ಮತ್ತು ಸರಿಯಾಗಿವೆಯೆಂದು ಪ್ರಮಾಣೀಕರಿಸುತ್ತೇನೆ ಮತ್ತು ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡುಬಂದಲ್ಲಿ ನನ್ನ ಅಭ್ಯರ್ಥಿತನವನ್ನು ರದ್ದುಪಡಿಸಬಹುದು ಎಂದು ಈ ಮೂಲಕ ಘೋಷಿಸುತ್ತೇನೆ.

ದಿನಾಂಕ ಃಃ

ಸ್ಥಳ ಃಃ ಅಭ್ಯರ್ಥಿಯ ಸಹಿ.

ಪಿ.ಆರ್. 524

**ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ,**
**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**
**ಅಲ್ಪಾವಧಿ ಟೆಂಡರು ಅಧಿಸೂಚನೆ ಸಂ. 03:2009–10, ದಿನಾಂಕ: 25ನೇ ಮೇ 2009**
**2ನೇ ಕರೆ**

ಕರ್ನಾಟಕ ರಾಜ್ಯಪಾಲರ ಪರವಾಗಿ ಮೈಸೂರು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗದ ಕಾರ್ಯಪಾಲಕ ಇಂಜಿನಿಯರ್‌ರವರಿಂದ ಈ ಮೇಲ್ಕಂಡ ಅಲ್ಪಾವಧಿ ಅಧಿಸೂಚನೆಯಡಿ ಆಹ್ವಾನಿಸಲಾಗಿದ್ದ, ಅಲ್ಪಾವಧಿ ಐಟಂವಾರು ಟೆಂಡರ್ ಅಧಿಸೂಚನೆ 2ನೇ ಕರೆಯನ್ನು ಆಹ್ವಾನಿಸಲಾಗಿದ್ದು, ಈ ಕೆಳಕಂಡ ಕಾಮಗಾರಿಗಳನ್ನು ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ (viz http://eproc.karnataka.gov.in) ದಿ: 04.07.2009 ರಿಂದ ದಿ: 13.07.2009ರ ಸಂಜೆ 4.00 ಗಂಟೆ ವರೆಗೆ ಡೌನ್‌ಲೋಡ್ ಮಾಡಿಕೊಳ್ಳಬಹುದಾಗಿರುತ್ತದೆ.

(1) ಟಿ.ನರಸೀಪುರ ತಾಲ್ಲೂಕು ಮಾದಾಪುರ–ತಲಕಾಡು–ಸರಗೂರು ಹ್ಯಾಂಡ್ ಪೋಸ್ಟ್ ರಸ್ತೆಯ ಸ. 4.70 ರಿಂದ 16.60 ಕಿ.ಮೀ. ವರೆಗೆ ಅಭಿವೃದ್ಧಿ ಕಾಮಗಾರಿ ಟೆಂಡರ್ ಆಹ್ವಾನಿಸಲಾಗಿದ್ದು, ಟೆಂಡರಿಗಿಟ್ಟ ಮೊತ್ತ ರೂ. 1917.00 ಲಕ್ಷ, ಇ.ಎಂ.ಡಿ. 19.17 ಲಕ್ಷ. (2) ಟಿ.ನರಸೀಪುರ ತಾಲ್ಲೂಕು ತಲಕಾಡು ವಿಜಯಪುರ–ಹೊಳೆಸಾಲು ರಸ್ತೆಯ ಸ. 0.00 ರಿಂದ 17.15 ಕಿ.ಮೀ. ರಸ್ತೆ ಅಭಿವೃದ್ಧಿ ಕಾಮಗಾರಿ (ಬೆಳಕವಾಡಿ ವರೆಗೆ) ಟೆಂಡರ್ ಆಹ್ವಾನಿಸಲಾಗಿದ್ದು, ಟೆಂಡರಿಗಿಟ್ಟ ಮೊತ್ತ ರೂ. 3110.00 ಲಕ್ಷ, ಇ.ಎಂ.ಡಿ. 31.10 ಲಕ್ಷ ಮೇಲಿನ ಕಾಮಗಾರಿಗಳ ಕ್ರಮ ಸಂ. 1 ರಿಂದ 2ರ ಟೆಂಡರ್ ಫಾರಂ ಬೆಲೆ ರೂ. 7500 + ಶೇ. 10 ರಷ್ಟು ತೆರಿಗೆ (ಪ್ರತ್ಯೇಕ) ಮತ್ತು ಮೇಲಿನ ಎಲ್ಲಾ ಕಾಮಗಾರಿಗಳಿಗೆ 1ನೇ ದರ್ಜೆ ಗುತ್ತಿಗೆದಾರರು ಭಾಗವಹಿಸಬಹುದು. ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ಟೆಂಡರ್ ಸಲ್ಲಿಸಲು ದಿನಾಂಕ: 13.07.2009ರಂದು ಸಂಜೆ 4.00 ಗಂಟೆಗೆ ಟೆಂಡರ್ ಸಲ್ಲಿಸಲು ಕಡೆಯ ದಿನವಾಗಿರುತ್ತದೆ. ಮತ್ತು ಕಾಮಗಾರಿಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳು ಬೇಕಾದಲ್ಲಿ ಕೆಳಗೆ ಸಹಿ ಮಾಡಿರುವವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಕಾರ್ಯಪಾಲಕ ಇಂಜಿನಿಯರ್,
ಲೋ. ಬಂ. ಮತ್ತು ಒ. ಜ. ಸಾರಿಗೆ ಇಲಾಖೆ, ಮೈಸೂರು ವಿಭಾಗ, ಮೈಸೂರು

**PUBLIC WORKS, PORTS & INLAND WATER TRANSPORT DEPARTMENT**
**INVITATION FOR SHORT TERM TENDERS**
**No. EE/ PWD, Mysore Division, Mysore IFT No. 03/ 2009-10, Dt. 25th May 2009.**
**CALL - 2**

1. The Executive Engineer, Public works, Ports & Inland Water Transport Department, Mysore Division invites tenders from eligible tenderers in **TWO COVER SYSTEM** for the road works detailed in the table through e-procurement portal of the Government of Karnataka **(viz http://eproc.karnataka.gov.in)** The tenderers are advised to note the minimum qualification criteria specified in clause-3 of the Instructions to Tenderers to qualify for award of the contract.

2. Tender documents may be downloaded from the e-procurement portal of the Government of Karnataka from **04.07.2009 to 13.07.2009**

3. Tenders must be accompanied by earnest money deposit specified for the work in the table below. Earnest money deposit will have to be in any one of the forms as per the instructions in the e-procurement portal and shall have to be valid for **45 days** beyond the validity of the tender.

4. Tenders must be submitted online through e-procurement portal on or before **16.00 hours** on **13.07.2009** and the opening of the tenders will be as per the e-procurement portal guidelines.

5. Other details and conditions can be seen in the tender documents.

**TABLE**

| Sl. No. | Name of the Work | Form No. | Approximate value of work (Rs. in lakhs) | Earnest money deposit (Rs. in lakhs) | Cost of document (Rs.) | Period of completion including rainy season | Contractor eligibility |
|---|---|---|---|---|---|---|---|
| 1 | Impt, & Strengthening of Madapur-Talakadu-Sargur Hand post road from ch. 4.70 to 16.60 Km in T.Narasipura Taluk. | K/W-4 | 1917.00 | 19.17 | 7500.00 | 4 Months | Class-1 |

| Sl. No. | Name of the Work | Form No. | Approximate value of work (Rs. in lakhs) | Earnest money deposit (Rs. in lakhs) | Cost of document (Rs.) | Period of completion including rainy season | Contractor eligibility |
|---|---|---|---|---|---|---|---|
| 2 | Impt, & Strengthening of Talakadu-Vijayapura-Holesalu road from ch. 0.00 to 17.15 Km in T.Narasipura Taluk (upto Belakavadi) | K/W-4 | 3110.00 | 31.10 | 7500.00 | 4 Months | Class-1 |

P.R. 528 Executive Engineer, P.W.P. & I.W.T. Department. Mysore Division, Mysore

**KARNATAKA PUBLIC SERVICE COMMISSION , 'UDYOGA SOUDHA' BANGALORE - 1**

**NOTIFICATION**

**No. PSC 23 RTB 2008, Dated: 2nd April 2009**

In pursuance of this Office Notification No. PSC 1 RTB-1/2008 dated:02/06/2008, the Provisional Select List of candidates for 02 posts of LECTURER IN LETTER PRESS in the Department of TECHNICAL EDUCATION (POLYTECHNIC) prepared on the the basis of Rule 8(1) of Karnataka Civil Services (Direct Recruitment by Competitive Examinations and Selection) (General) Rules, 2006 and amendment Rules 2007, was published vide Notification of even number dated 31/01/2009 inviting objections, if any, from candidates within 15 days of its pubilication. No objections have been received and the final selection list is here by published for information of the candidates.

Appointing Authority : GOVERNMENT

Name of the Department : TECHNICAL EDUCATION

| SL.NO. | NAME OF THE CANDIDATE | INT.NO. | D_O_B | RESVN./QUALN | MARKS |
|---|---|---|---|---|---|
| 1 | SHANKAR GURU L C<br>#623 SRI SHANKAR GURU NILAYA<br>CHIKKABANAVARA PO<br>BANGALORE-560090 | 3 | 02/06/80 | GM<br>BE (PRINT.ENGG) | 81.70<br>2007 |
| 2 | SHYAMALAKUMARI D<br>#102/81 KHB COLONY KS TOWN<br>KENGERI<br>BANGALORE-560060 | 4 | 22/07/77 | SC<br>BE(PRINT.ENGG) | 91.98<br>2003 |

**H.B. CHANNARAJU**

P.R. 529 Secretary I/C

Karnataka Public Service Commission.

**ಜಿಲ್ಲಾ ಪಂಚಾಯತ್ ಶಿವಮೊಗ್ಗ**

**ದೇಮ್ಲಾಪುರ ಗ್ರಾಮ ಪಂಚಾಯಿತಿ, ದೇಮ್ಲಾಪುರ**

**ಅಲ್ಪಾವಧಿ ಇ–ಟೆಂಡರ್ ಪ್ರಕಟಣೆ**

**ಸಂಖ್ಯೆ: ಗ್ರಾ.ಪಂ.ದೇಮ್ಲಾಪುರ : ಅಧ್ಯಕ್ಷರು : ಕಾರ್ಯದರ್ಶಿ : ಸ್ವ.ಗ್ರಾ.ಯೋ/09–10, ದಿನಾಂಕ: 25ನೇ ಜುಲೈ 2009**

ಜಿಲ್ಲಾ ಪಂಚಾಯತ್, ಶಿವಮೊಗ್ಗ ವ್ಯಾಪ್ತಿಯ ತೀರ್ಥಹಳ್ಳಿ ತಾಲ್ಲೂಕು, ದೇಮ್ಲಾಪುರ ಗ್ರಾಮ ಪಂಚಾಯಿತಿ, ಯೋಗಿಮಳಲಿ ಗ್ರಾಮದ ಸ್ವಚ್ಛ ಗ್ರಾಮ ಯೋಜನೆಯ ಅನುಷ್ಠಾನಕ್ಕಾಗಿ ಸಂಹಿತೆ (ಭಾಗ–2) ಪಿ.ಡಬ್ಲ್ಯೂಡಿ. ಅಭಿವೃದ್ಧಿ ಇಂಜಿನಿಯರಿಂಗ್ ಇಲಾಖೆಯಲ್ಲಿ ನೋಂದಾಯಿತ ಅರ್ಹ ಗುತ್ತಿಗೆದಾರರಿಂದ ಐಟಂವಾರು ಟೆಂಡರ್‌ಗಳನ್ನು ಟರ್ನ್ ಕೀ ಆಧಾರದಲ್ಲಿ ಆಹ್ವಾನಿಸಲಾಗಿದೆ.

1. ಟೆಂಡರ್ ಫಾರಂಗಳಿಗೆ ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ: 10.7.2009 ಸಾಯಂಕಾಲ 5.30 ರವರೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: 15.7.2009 ಸಾಯಂಕಾಲ 5.30 ರವರೆಗೆ
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ದಿನಾಂಕ:17.7.2009 ಸಾಯಂಕಾಲ 5.30 ರವರೆಗೆ

| ಕ್ರ ಸಂ. | ಕೆಲಸದ ವಿವರ | ಎಷ್ಟನೇ ಕರೆ | ಟೆಂಡರ್ ಕೆಲಸದ ಅಂದಾಜು ಮೊತ್ತ ಲಕ್ಷ ರೂ.ಗಳಲ್ಲಿ | ಇ.ಎಂ.ಡಿ. ರೂ.ಗಳಲ್ಲಿ (11/2%) | ಟೆಂಡರ್ ಫಾರಂನ ಬೆಲೆ (ರೂ.ಗಳಲ್ಲಿ ಎಲ್ಲಾ ತೆರಿಗೆ ಸೇರಿ) | ಅರ್ಹರಾದ ಗುತ್ತಿಗೆ ದಾರರು | ಕೆಲಸ ಮುಗಿಸಲು ನಿಗದಿಪಡಿಸಿದ ಕಾಲಾವಧಿ (ಮಳೆಗಾಲ ಬಿಟ್ಟು) |
|---|---|---|---|---|---|---|---|
| 1. | ದೇಮ್ಲಾಪುರ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಯೋಗಿಮಳಲಿ ಗ್ರಾಮದ ಸ್ವಚ್ಛ ಗ್ರಾಮ ಯೋಜನೆ | 1ನೇ | 16.46668 | 300000 | 3000–00 | 2ನೇ ದರ್ಜೆ ಮೇಲ್ಪಟ್ಟು | 6 ತಿಂಗಳು |

ಮೇಲ್ಕಂಡ ದಿನಾಂಕಗಳಲ್ಲಿ ಸರ್ಕಾರಿ ರಜೆ ದಿನಗಳಾದಲ್ಲಿ ಮುಂದಿನ ದಿನವನ್ನು ಪರಿಗಣಿಸತಕ್ಕದ್ದು. ಹೆಚ್ಚಿನ ವಿವರಗಳನ್ನು ಆ ಕಛೇರಿಯಿಂದ ಪಡೆಯಬಹುದಾಗಿದೆ. ಟೆಂಡರ್ ಆದ ದಿನದಂದು ಟೆಂಡರ್ ತೆರೆಯಲಾಗುವುದು.

ಕಾರ್ಯದರ್ಶಿಗಳು, ದೇಮ್ಲಾಪುರ ಗ್ರಾಮ ಪಂಚಾಯಿತಿ, ತೀರ್ಥಹಳ್ಳಿ

ಅಧ್ಯಕ್ಷರು, ದೇಮ್ಲಾಪುರ ಗ್ರಾಮ ಪಂಚಾಯಿತಿ, ತೀರ್ಥಹಳ್ಳಿ

**ಷರತ್ತುಗಳು**

1. ಗುತ್ತಿಗೆದಾರರು ಅರ್ಹ ದರ್ಜೆಯನ್ನು ನೋಂದಾಯಿತವಾಗಿರುವ ಬಗ್ಗೆ ಪ್ರಮಾಣ ಪತ್ರ ಹಾಗೂ ಗುತ್ತಿಗೆದಾರರ ದಾಖಲಾತಿ ಪುಸ್ತಕವನ್ನು ಸಲ್ಲಿಸಿ ದಾಖಲಾತಿ ಮಾಡಿಸಿಕೊಳ್ಳತಕ್ಕದ್ದು.
2. ಮುಂಗಡ ಠೇವಣಿ ಹಣವನ್ನು ಡಿ.ಡಿ/ ಎಫ್.ಡಿ. ರೂಪದಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಪಡೆದು ಅಥವಾ ರಾಷ್ಟ್ರೀಯ ಉಳಿತಾಯ ಪತ್ರ ರೂಪದಲ್ಲಿ ಕಾರ್ಯದರ್ಶಿ, ದೇಮ್ಲಾಪುರ ಗ್ರಾಮ ಪಂಚಾಯಿತಿಯವರ ಹೆಸರಿಗೆ ಅಡಮಾನ (ಪ್ಲೆಡ್ಜ್) ಮಾಡಿಯೇ ಸಲ್ಲಿಸಬೇಕು. ಇಲ್ಲದಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ನೇರವಾಗಿ ತಿರಸ್ಕರಿಸಲಾಗುವುದು.
3. ಗುತ್ತಿಗೆದಾರರು ಕಳೆದ ಐದು ವರ್ಷಗಳಲ್ಲಿ ಟೆಂಡರ್‌ಗಿಟ್ಟ ಮೊತ್ತದ ಶೇ.50% ರಷ್ಟು ಮೌಲ್ಯದ ಇದೇ ರೀತಿಯ ಕನಿಷ್ಠ ಒಂದು ಕಾಮಗಾರಿಯನ್ನು ತೃಪ್ತಿಕರವಾಗಿ ನಿಗದಿತ ಸಮಯದಲ್ಲಿ ಪೂರ್ಣಗೊಳಿಸಿರಬೇಕು ಹಾಗೂ ನಿರ್ವಹಿಸಿದ ಕೆಲಸದ ವಿವರಗಳ ಪ್ರಮಾಣ ಪತ್ರಗಳನ್ನು ಮನವಿ ಪತ್ರ ಸಲ್ಲಿಸುವಾಗಲೇ ಲಗತ್ತಿಸಬೇಕು ಹಾಗೂ ನಿರ್ವಹಿಸಿದ ಕೆಲಸದ ವಿವರಗಳ ಪ್ರಮಾಣ ಪತ್ರಗಳು ಕಾರ್ಯಪಾಲಕ ಇಂಜಿನಿಯರ್‌ರವರಿಗಿಂತ ಕಡಿಮೆಯಿಲ್ಲದ ಅಧಿಕಾರಿಯವರಿಂದ ಪಡೆದಿರತಕ್ಕದ್ದು.
4. ಸದರಿ ಕೆಲಸಕ್ಕೆ ಬೇಕಾಗುವ ಡಾಂಬರ್, ಉಕ್ಕು/ಸಿಮೆಂಟ್ ಇತರೆ ಸಾಧನ, ಸಾಮಗ್ರಿಗಳನ್ನು ಸ್ವತಃ ಗುತ್ತಿಗೆದಾರರು ಸರಬರಾಜು ಮಾಡಿ ಕೆಲಸ ನಿರ್ವಹಿಸತಕ್ಕದ್ದು ಹಾಗೂ ಖರೀದಿಸಿದ ಬಗ್ಗೆ ಬಿಲ್ಲು ಮತ್ತು ಗುಣಮಟ್ಟದ ಕುರಿತು ದೃಢೀಕರಣ ಪತ್ರಗಳನ್ನು ತಮ್ಮ ಸ್ವಂತ ಖರ್ಚಿನಲ್ಲಿಯೇ ಸಲ್ಲಿಸತಕ್ಕದ್ದು.
5. ಈ ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
6. ಗುತ್ತಿಗೆದಾರರು ಅಂದಾಜು ಮೊತ್ತಕ್ಕಿಂತ ಕಡಿಮೆ ದರ ನಮೂದಿಸಿದಲ್ಲಿ ವ್ಯತ್ಯಾಸದ ಮೊತ್ತವನ್ನು ಡಿ.ಡಿ. ರೂಪದಲ್ಲಿ ಟೆಂಡರ್‌ನೊಂದಿಗೆ ಸಲ್ಲಿಸತಕ್ಕದ್ದು.
7. ಸದರಿ ಮೊತ್ತವನ್ನು ಪಾವತಿಸದಿದ್ದಲ್ಲಿ ಟೆಂಡರನ್ನು ಪರಿಗಣಿಸಲಾಗುವುದಿಲ್ಲ ಹಾಗೂ ಈ ಮೊತ್ತವನ್ನು ಕಾಮಗಾರಿಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸಿದ ನಂತರ ಹಿಂದಿರುಗಿಸಲಾಗುವುದು.
8. ಟೆಂಡರ್ ಸಲ್ಲಿಸುವಾಗ ಟೆಂಡರ್ ದಾಖಲಾತಿಗಳ ಪ್ರತಿ ಪುಟಗಳನ್ನೂ ತುಂಬಿ ಎಲ್ಲಾ ಪುಟಗಳಿಗೆ ಗುತ್ತಿಗೆದಾರರ ಸಹಿ ಮಾಡಿರಬೇಕು.
9. ಗುತ್ತಿಗೆದಾರರು ಈ ಹಿಂದೆ ಯಾವುದೇ ಕೆಲಸವನ್ನು ಪೂರ್ಣಗೊಳಿಸದೇ ಮಧ್ಯದಲ್ಲಿಯೇ ತೊರೆದಿರಬಾರದು ಹಾಗೂ ಸಕಾರಣವಿಲ್ಲದೆ ಯಾವುದೇ ಕಾಮಗಾರಿಯನ್ನು ವಿಳಂಬವಾಗಿ ಪೂರೈಸಿರಬಾರದು.
10. ಖಾಲಿ ಟೆಂಡರ್ ಫಾರಂಗಳನ್ನು ಅಂಚೆ ಮೂಲಕ ಕಳುಹಿಸಲಾಗುವುದಿಲ್ಲ.
11. ಯಾವುದೇ ಕಾರಣವನ್ನು ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಟೆಂಡರ್ ಸ್ವೀಕರಿಸುವ ಅಧಿಕಾರಿಯವರು ಹೊಂದಿರುತ್ತಾರೆ.
12. ಷರತ್ತಿನ ಟೆಂಡರನ್ನು ಸ್ವೀಕರಿಸಲಾಗುವುದಿಲ್ಲ.
13. 43 ಗ್ರೇಡ್ ಸಿಮೆಂಟ್ ಮತ್ತು ಕಬ್ಬಿಣ ಹಾಗೂ ಇತರೆ ಸಾಮಗ್ರಿಗಳ ಗುಣಮಟ್ಟವು ಐ.ಎಸ್.ಐ.ನಿಂದ ದೃಢೀಕರಣ ಹೊಂದಿರಬೇಕು ಹಾಗೂ ಗುಣಮಟ್ಟದ ದೃಢೀಕರಣವನ್ನು ಸಂಬಂಧಿಸಿದ ಅಧಿಕಾರಿಗಳಿಂದ ಪಡೆದ ನಂತರವೇ ಉಪಯೋಗಿಸುವುದು.
14. ಚಾಲ್ತಿಯಲ್ಲಿರುವ ಪಾರದರ್ಶಕ ನಿಯಾವಳಿಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.

ಕಾರ್ಯದರ್ಶಿಗಳು, ದೇಮ್ಲಾಪುರ ಗ್ರಾಮ ಪಂಚಾಯಿತಿ, ತೀರ್ಥಹಳ್ಳಿ

ಅಧ್ಯಕ್ಷರು, ದೇಮ್ಲಾಪುರ ಗ್ರಾಮ ಪಂಚಾಯಿತಿ, ತೀರ್ಥಹಳ್ಳಿ

ಪಿ.ಡಿ. 87

**ಪೊಲೀಸ್ ಅಧೀಕ್ಷಕರು, ವೈರ್‌ಲೆಸ್‌ರವರ ಕಛೇರಿ, ನಂ.1, ಎಂ.ಜಿ.ರಸ್ತೆ, ಬೆಂಗಳೂರು–560001**

**ಟೆಂಡರ್ ಕಂ ಹರಾಜು ಪ್ರಕಟಣೆ**

**ಸಂಖ್ಯೆ:ಸಂಗ್ರಹ.11/51/ನಿರುಪಯುಕ್ತ ಬ್ಯಾಟರಿ/08–09, ದಿನಾಂಕ: 17ನೇ ಜೂನ್ 2009**

**ವಿಷಯ:** ಪೊಲೀಸ್ ವೈರ್‌ಲೆಸ್ ಘಟಕದಲ್ಲಿರುವ ನಿರುಪಯುಕ್ತ ನಿರ್ವಹಣ ರಹಿತ/ ಲೆಡ್‌ಆ್ಯಸಿಡ್, ಎನ್‌ಐಸಿಡಿ, ಎನ್‌ಐಎಮ್‌ಹೆಚ್ ಬ್ಯಾಟರಿಗಳನ್ನು ಟೆಂಡರ್ ಕಂ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಪೊಲೀಸ್ ವೈರ್‌ಲೆಸ್ ಘಟಕದಲ್ಲಿರುವ ವಿವಿಧ ಮಾದರಿಯ ನಿರುಪಯುಕ್ತವಾದ ನಿರ್ವಹಣ ರಹಿತ / ಲೆಡ್‌ಆ್ಯಸಿಡ್, ಎನ್‌ಐಸಿಡಿ, ಎನ್‌ಐಎಮ್‌ಹೆಚ್ ಬ್ಯಾಟರಿಗಳನ್ನು ದಿನಾಂಕ: 27.08.2009 ರಂದು ಬೆಳಿಗ್ಗೆ 11 ಗಂಟೆಗೆ ಪೊಲೀಸ್ ಅಧೀಕ್ಷಕರು ವೈರ್‌ಲೆಸ್, ನಂ.1, ಎಂ.ಜಿ.ರಸ್ತೆ, ಬೆಂಗಳೂರು ರವರ ಕಛೇರಿಯಲ್ಲಿ ಟೆಂಡರ್ ಕಂ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ವಿಲೇವಾರಿ ಮಾಡುವ ನಿರುಪಯುಕ್ತ ಬ್ಯಾಟರಿಗಳ ವಿವರ ಈ ಕೆಳಕಂಡಂತೆ ಇರುತ್ತದೆ. ಈ ಕೆಳಗೆ ತೋರಿಸಿರುವ ವಿವಿಧ ರೀತಿಯ ಬ್ಯಾಟರಿಗಳನ್ನು ಪ್ರತ್ಯೇಕವಾಗಿ ಅಂದರೆ ಒಂದೊಂದೇ ರೀತಿಯ ಬ್ಯಾಟರಿಗಳನ್ನು ವಿಲೇವಾರಿ ಮಾಡಲಾಗುವುದು ಕ್ರ.ಸಂ.8 ಅನ್ನು ಲಾಟ್‌ನಲ್ಲಿ ಪರಿಗಣಿಸಲಾಗುವುದಿಲ್ಲ.

| ಕ್ರ. ಸಂ. | ನಿರುಪಯುಕ್ತ ಬ್ಯಾಟರಿಗಳ ವಿವರ | ಪರಿಮಾಣ |
|---|---|---|
| 1 | 12V 13 P ಲೆಡ್‌ಆ್ಯಸಿಡ್ ಬ್ಯಾಟರಿ | 84 ಸಂಖ್ಯೆ |
| 2 | 12V 21 P ಲೆಡ್‌ಆ್ಯಸಿಡ್ ಬ್ಯಾಟರಿ | 1 ಸಂಖ್ಯೆ |
| 3 | 12V 188AH ಲೆಡ್‌ಆ್ಯಸಿಡ್ ಬ್ಯಾಟರಿ | 25 ಸಂಖ್ಯೆ |
| 4 | 12V 65AH ನಿರ್ವಹಣೆ ರಹಿತ ಬ್ಯಾಟರಿ | 373 ಸಂಖ್ಯೆ |
| 5 | 12V 100AH ನಿರ್ವಹಣೆ ರಹಿತ ಬ್ಯಾಟರಿ | 1616 ಸಂಖ್ಯೆ |
| 6 | 12V 14 AH ಲೆಡ್‌ಆ್ಯಸಿಡ್ ಬ್ಯಾಟರಿ | 3 ಸಂಖ್ಯೆ |
| 7 | 12V 7AH ಡ್ರೈಪಿಟ್ ಬ್ಯಾಟರಿ | 28 ಸಂಖ್ಯೆ |
| 8 | NiMh /NiCd ವಾಕಿಟಾಕಿ ಬ್ಯಾಟರಿ | 9599 ಸಂಖ್ಯೆ |

**ನಿಬಂಧನೆಗಳು:–**

1. ಮೊಹರು ಮಾಡಿದ ಟೆಂಡರ್ (ಸೀಲ್ಡ್‌ಕವರ್) ಲಕೋಟೆಯನ್ನು ಪೊಲೀಸ್ ಅಧೀಕ್ಷಕರು, ವೈರ್‌ಲೆಸ್, ನಂ.1, ಮಹಾತ್ಮ ಗಾಂಧಿ ರಸ್ತೆ, ಬೆಂಗಳೂರು – 560 001 ಮತ್ತು ಮೊಹರಿನ ಮೇಲೆ **"ನಿರುಪಯುಕ್ತ ನಿರ್ವಹಣ ರಹಿತ / ಲೆಡ್‌ಆ್ಯಸಿಡ್, ಎನ್‌ಐಸಿಡಿ & ಎನ್‌ಐಎಮ್‌ಹೆಚ್ ಬ್ಯಾಟರಿಗಳ ಖರೀದಿಸುವ ಸಲುವಾಗಿ ಟೆಂಡರ್"** ಎಂಬುದಾಗಿ ಬರೆಯತಕ್ಕದ್ದು.
2. ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ನಿರುಪಯುಕ್ತ ಬ್ಯಾಟರಿಗಳನ್ನು ಖರೀದಿಸುವ ಬಗ್ಗೆ ನೋಂದಾಯಿತ ಪ್ರಮಾಣ ಪತ್ರ ಹೊಂದಿರುವ ಸಂಸ್ಥೆಯವರು ಮಾತ್ರ ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ ಮತ್ತು ನೊಂದಾವಣೆ ಪತ್ರದ ಪ್ರತಿ ಲಗತ್ತಿಸುವುದು.
3. ಟೆಂಡರ್ ಅರ್ಜಿಯಲ್ಲಿ ವಿವಿಧ ಬ್ಯಾಟರಿಗಳಿಗೆ ಪ್ರತ್ಯೇಕವಾಗಿ ದರವನ್ನು ಅಂಕಿ ಮತ್ತು ಅಕ್ಷರಗಳಲ್ಲಿ ಬರೆದಿರಬೇಕು.
4. ಟೆಂಡರ್ ಅರ್ಜಿಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
5. ಪ್ರತಿಯೊಬ್ಬ ಟೆಂಡರ್‌ದಾರರು/ಬಿಡ್‌ದಾರರು ಅರ್ಜಿಯೊಂದಿಗೆ 10,000/–ರೂಗಳ ಡಿ.ಡಿ.ಯನ್ನು ಪೊಲೀಸ್ ಅಧೀಕ್ಷಕರು, ವೈರ್‌ಲೆಸ್ ರವರ ಹೆಸರಿಗೆ ಠೇವಣಿ ಮಾಡಬೇಕು ಮತ್ತು ಈ ಹಣಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ಕೊಡಲಾಗುವುದಿಲ್ಲ. ಠೇವಣಿ ಇಲ್ಲದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
6. ಪೂರ್ಣವಾದ ವಿವರಗಳೊಂದಿಗೆ ಭರ್ತಿಮಾಡಿದ ಟೆಂಡರ್ ಅರ್ಜಿಯನ್ನು ದಿನಾಂಕ: 26.08.2009ರಂದು ಸಮಯ ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ತದನಂತರ ಬಂದ ಟೆಂಡರ್ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
7. ಪೊಲೀಸ್ ಅಧೀಕ್ಷಕರು, ವೈರ್‌ಲೆಸ್, ಅಥವಾ ಅವರಿಂದ ನೇಮಿಸಲ್ಪಟ್ಟಿರುವ ಅಧಿಕಾರಿಗಳು ಮೊಹರುಗಳನ್ನು ತೆರೆದು ಖರೀದಿಸುವ ಸಂಸ್ಥೆಗಳು ಸಲ್ಲಿಸಲಾದ ಅರ್ಜಿಗಳನ್ನು ಪರಿಶೀಲಿಸಿ ಸಂಸ್ಥೆಗಳ ಪಟ್ಟಿಯನ್ನು ಮತ್ತು ಅವರುಗಳು ಖರೀದಿಸಲು ಸೂಚಿಸಿರುವ ದರಗಳ ಪಟ್ಟಿಯನ್ನು ತಯಾರಿಸುವರು.

8. ಟೆಂಡರ್ ಕವರ್‌ಗಳನ್ನು ದಿನಾಂಕ: 27.08.2009 ರಂದು ಬೆಳಿಗ್ಗೆ 11.00 ಗಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಇಚ್ಚೆಯುಳ್ಳ ಟೆಂಡರ್‌ದಾರರು/ ಬಿಡ್ ದಾರರು /ಪ್ರತಿನಿಧಿಗಳು ಟೆಂಡರ್ ತೆರೆಯುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶವಿರುತ್ತದೆ.
9. ಬ್ಯಾಟರಿಗಳನ್ನು ಖರೀದಿಸಲು ಅತೀ ಹೆಚ್ಚಿನ ದರಗಳನ್ನು ನಮೂದಿಸಿರುವ ಟೆಂಡರ್/ ಬಿಡ್‌ದಾರರನ್ನು ಯಶಸ್ವಿ ಟೆಂಡರ್/ ಬಿಡ್‌ದಾರರೆಂದು ಪರಿಗಣಿಸಿ ದಾಖಲಿಸಲಾಗುವುದು.
10. ಟೆಂಡರ್ ಅರ್ಜಿಯಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿಮಾಡಿದ್ದಲ್ಲಿ ಆ ಸ್ಥಳದಲ್ಲಿ ಟೆಂಡರ್‌ದಾರರು ತಮ್ಮ ಪೂರ್ಣವಾದ ಸಹಿಯನ್ನು ಮಾಡತಕ್ಕದ್ದು.
11. ಯಶಸ್ವಿ ಟೆಂಡರ್/ಬಿಡ್‌ದಾರರನ್ನು ದಾಖಲಿಸಿದ ನಂತರ ಉಳಿದ ಟೆಂಡರ್/ಬಿಡ್‌ದಾರರ ಡಿ.ಡಿ.ಗಳನ್ನು ತಕ್ಷಣದಲ್ಲಿಯೇ ಹಿಂತಿರುಗಿಸಲಾಗುವುದು.
12. ಯಶಸ್ವಿ ಟೆಂಡರ್/ಬಿಡ್‌ದಾರರು ಖರೀದಿಸಿದ ಬ್ಯಾಟರಿಗಳ ಒಟ್ಟು ಹಣದಲ್ಲಿ ಶೇಕಡ 25%ರಷ್ಟನ್ನು ನಗದಾಗಿ ಸ್ಥಳದಲ್ಲಿಯೇ ಪಾವತಿಸಬೇಕಾಗಿರುತ್ತದೆ ಹಾಗೂ ಉಳಿದ ಹಣವನ್ನು 15 ದಿನಗಳೊಳಗಾಗಿ ಪಾವತಿಸಿ ಸಾಮಗ್ರಿಗಳನ್ನು ಪಡೆಯಬಹುದಾಗಿರುತ್ತದೆ. ತಪ್ಪಿದಲ್ಲಿ ಠೇವಣಿ ಹಣವನ್ನು ವಾಪಸ್ಸು ನೀಡಲಾಗುವುದಿಲ್ಲ. ಮತ್ತು ಅವರ ಟೆಂಡರ್‌ನ್ನು ಪರಿಗಣಿಸಲಾಗುವುದಿಲ್ಲ. ಹಾಗೂ ಹೊಸದಾಗಿ ಬ್ಯಾಟರಿಗಳನ್ನು ವಿಲೇವಾರಿ ಮಾಡುವ ಬಗ್ಗೆ ಕ್ರಮ ತೆಗೆದುಕೊಳ್ಳಲಾಗುವುದು.
13. ಚೆಕ್ ಗಳನ್ನು ಸ್ವೀಕರಿಸಲಾಗುವುದಿಲ್ಲ.
14. ಎಲ್ಲಾ ನಗದು ಹಣವನ್ನು ಪೊಲೀಸ್ ಅಧೀಕ್ಷಕರು, ವೈರ್‌ಲೆಸ್‌ರವರ ಹೆಸರಿಗೆ ಪಾವತಿಸಿದ ನಂತರ (ನಗದು ಶಾಖೆಯಲ್ಲಿ) ಅಧಿಕೃತ ರಸೀದಿಯನ್ನು ನೀಡಲಾಗುವುದು.
15. ಮಾರಾಟವಾದ ಬ್ಯಾಟರಿಗಳನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಒಪ್ಪಿಗೆ ಪಡೆದ ನಂತರ ಹಸ್ತಾಂತರಿಸಲಾಗುವುದು.
16. ಇದಕ್ಕೆ ಅನ್ವಯವಾಗುವ ವ್ಯಾಟ್ ಹಾಗೂ ಇತರೆ ಚಾರ್ಜ್‌ಗಳನ್ನು ಪ್ರತ್ಯೇಕವಾಗಿ ವಸೂಲಿ ಮಾಡಲಾಗುವುದು.
17. ಯಶಸ್ವಿ ಟೆಂಡರ್/ ಬಿಡ್‌ದಾರರು ನಿರುಪಯುಕ್ತ ಸಾಮಗ್ರಿಗಳ ಪೂರ್ತಿ ಹಣವನ್ನು ಪಾವತಿಸಿದ ನಂತರ ಪೊಲೀಸ್ ಅಧೀಕ್ಷಕರು, ವೈರ್‌ಲೆಸ್ ರವರ ಕಛೇರಿಯಿಂದ ತಮ್ಮ ಸ್ವಂತ ಖರ್ಚಿನಿಂದ ಸಾಗಿಸುವ ವ್ಯವಸ್ಥೆಯನ್ನು ಮಾಡಿಕೊಳ್ಳತಕ್ಕದ್ದು.
18. ಟೆಂಡರ್ ಕಂ ಹರಾಜನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ವೈರ್‌ಲೆಸ್‌ರವರು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮವಾಗಿರುತ್ತದೆ.
19. ಮೇಲೆ ತಿಳಿಸಿರುವ ಟೆಂಡರ್ ಕಂ ಹರಾಜಿನಲ್ಲಿ ಷರತ್ತು ಮತ್ತು ನಿಬಂಧನೆಗಳ ವಿಷಯದಲ್ಲಿ ಯಾವುದೇ ವಾದ–ವಿವಾದ ಉದ್ಭವಿಸಿದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
20. ನಿರುಪಯುಕ್ತ ಬ್ಯಾಟರಿಗಳನ್ನು ಪೊಲೀಸ್ ಅಧೀಕ್ಷಕರು, ವೈರ್‌ಲೆಸ್‌ರವರ ಕಛೇರಿ, ನಂ.1, ಮಹಾತ್ಮ ಗಾಂಧಿ ರಸ್ತೆ, ಬೆಂಗಳೂರು ಇಲ್ಲಿ ರಜಾದಿನಗಳಂದು ಹೊರತುಪಡಿಸಿ, ಉಳಿದ ದಿನಗಳಲ್ಲಿ ಕಛೇರಿ ವೇಳೆಯಲ್ಲಿ ಪರೀಕ್ಷಿಸಬಹುದಾಗಿರುತ್ತದೆ.

ಪಿ.ಆರ್. 507 ಪೊಲೀಸ್ ಅಧೀಕ್ಷಕರು, ವೈರ್‌ಲೆಸ್, ಬೆಂಗಳೂರು.

**INFRASTRUCTURE DEVELOPMENT DEPARTMENT**

**STATE TENDER BULLETIN**

**No. IDD 81 DIA 2009, Bangalore, Dated: 29th June 2009**

Following Tender Notice is hereby published as part of State Tender Bulletin for the months of March 2009 and July 2009. Tender Notification for the work: EoI with regard to High Speed Rail Link to Bangalore International Airport Project-Request for Qualification Document. The details of the tender may be obtained from Sri N.R.N.Simha, Deputy General Manager (IPD), KSIIDC, Bangalore-560001 and also from the website ie.www.ksiidc.com.

**T.B. RENUKA PRASAD**

P.R. 516

Deputy Secretary to Government,

Infrastructure Development Department.

## ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)
## ಕಾರ್ಯನಿರ್ವಾಹಕ ಇಂಜಿನೀಯರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ
## ಟೆಂಡರ್ ಪ್ರಕಟಣೆ
## (ಸ್ಟಾಂಡರ್ಡ್ ಟೆಂಡರ್ ಡಾಕ್ಯೂಮೆಂಟ್ ಕೆಡಬ್ಲ್ಯೂ–4ರ ಅನ್ವಯ ಗುತ್ತಿಗೆ ಆಹ್ವಾನ)

**ಕ್ರ.ಸಂ.ಸನೀ.ವಿ.ಬೆಳಗಾವಿ/ಸ.ಇಂ./ಟೆಂಡರ್/2009–10/1904, ದಿನಾಂಕ: 2ನೇ ಜೂನ್ 2009**

1. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ–2000ರ ಅಡಿಯಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿಗಳಿಗಾಗಿ ಅರ್ಹ ಗುತ್ತಿಗೆದಾರರಿಂದ ಗುತ್ತಿಗೆಯನ್ನು "ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ" ಇವರಿಂದ ದ್ವಿ ಲಕೋಟೆ ಪದ್ಧತಿಯಲ್ಲಿ ಆಹ್ವಾನಿಸಲಾಗಿದೆ. ದ್ವಿ ಲಕೋಟೆ ಪದ್ಧತಿಯನ್ನು ಕೆಟಿಪಿಪಿ ಅಧಿನಿಯಮ 28ರಂತೆ ಅನುಸರಿಸಲಾಗುವುದು. ಗುತ್ತಿಗೆದಾರರು ಟೆಂಡರ್‌ಗಳನ್ನು ಎರಡು ಪ್ರತ್ಯೇಕ ಲಕೋಟೆಗಳಲ್ಲಿ ಸೀಲ್ ಮಾಡಿ ಸಲ್ಲಿಸಬೇಕು ಮೊದಲನೆಯ ಲಕೋಟೆಯಲ್ಲಿ ಇ.ಎಂ.ಡಿ ಹಾಗೂ ಗುತ್ತಿಗೆದಾರರ ನಿರ್ವಹಿಸಲು ಇರುವ ಸಾಮರ್ಥ್ಯದ ವಿವರಗಳು (ಐಎಫ್‌ಟಿ. ಸೂಚನೆ 3 ಮತ್ತು 6ರಲ್ಲಿ ವಿವರಿಸಿದಂತೆ) ಹಾಗೂ ಎರಡನೆಯ ಲಕೋಟೆಯಲ್ಲಿ ಆರ್ಥಿಕ ಗುತ್ತಿಗೆಯನ್ನು ಸಲ್ಲಿಸಬೇಕು. ಮೊದಲನೆಯ ಲಕೋಟೆಯನ್ನು ಮೊದಲು ತೆರೆಯಲಾಗುವುದು ತದನಂತರ ಕೇವಲ ಗುತ್ತಿಗೆಯನ್ನು ನಿರ್ವಹಿಸಲು ಅರ್ಹವಿರುವ ಗುತ್ತಿಗೆದಾರರ ಎರಡನೆಯ ಲಕೋಟೆಯನ್ನು ಮಾತ್ರ ತೆರೆಯಲಾಗುವುದು. ಗುತ್ತಿಗೆ ಪಡೆಯಲು ಕನಿಷ್ಠ ಅವಶ್ಯಕ ಅರ್ಹತೆಗಳಿಗಾಗಿ ಗುತ್ತಿಗೆದಾರರು ಸೂಚನೆಗಳಲ್ಲಿ ಕಲಂ–3ನ್ನು ಸೂಕ್ಷ್ಮವಾಗಿ ಗಮನಿಸುವಂತೆ ಸೂಚಿಸಲಾಗಿದೆ.
2. ದಿನಾಂಕ:20.7.09 ರಿಂದ 23.7.09ರ ಒಳಗಿನ ಅವಧಿಯಲ್ಲಿ (ಕಛೇರಿ ಕಾರ್ಯಾವಧಿಯಲ್ಲಿ) ಈ ಕೆಳಗೆ ಕಾಣಿಸಿದ ಶುಲ್ಕವನ್ನು (ಹಿಂದಿರುಗಿಸಲಾಗದ) ಯಾವುದಾದರೂ ರಾಷ್ಟ್ರೀಕೃತ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ಪಡೆದ, ಬೆಳಗಾವಿಯಲ್ಲಿ ನಗದೀಕರಣ ಮಾಡಬಹುದಾದ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಹೆಸರಿನಲ್ಲಿ ಪಡೆಯಲಾದ ಡಿ.ಡಿ., ಪೇ ಆರ್ಡರ್ ಅಥವಾ ನಗದು ರೂಪದಲ್ಲಿ ತುಂಬಿ ಖಾಲಿ ಗುತ್ತಿಗೆ ಪತ್ರಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಕಛೇರಿಯಿಂದ ಪಡೆದುಕೊಳ್ಳಬೇಕು. ಗುತ್ತಿಗೆಗೆ ಸಂಬಂಧಿಸಿದ ಎಲ್ಲ ವಿವರಗಳನ್ನು ಆಸಕ್ತ ಗುತ್ತಿಗೆದಾರರು ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಛೇರಿಯಲ್ಲಿ ಪಡೆದುಕೊಳ್ಳಬೇಕು. ಗುತ್ತಿಗೆ ಪತ್ರಗಳನ್ನು ನೊಂದಾಯಿತ ಅಂಚೆ/ವೇಗದ ಅಂಚೆ ಮೂಲಕ ಪಡೆಯಲು ಇಚ್ಚಿಸಿದಲ್ಲಿ ರೂ.200.00ಗಳ ಹೆಚ್ಚುವರಿ ಶುಲ್ಕವನ್ನು ಭರಿಸಬೇಕಾಗುತ್ತದೆ. ಗುತ್ತಿಗೆ ಪತ್ರಗಳನ್ನು ಅಂಚೆ ಮೂಲಕ ಪಡೆಯುವಾಗ ವಿಳಂಬವಾದಲ್ಲಿ ಅಥವಾ ಗುತ್ತಿಗೆ ಪತ್ರಗಳು ಸ್ವೀಕೃತವಾಗದಿದ್ದಲ್ಲಿ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರು ಹೊಣೆಗಾರರಾಗುವುದಿಲ್ಲ.
3. ಕಾಮಗಾರಿಗಾಗಿ ನಿರ್ದಿಷ್ಟಪಡಿಸಿದ ಈ ಕೆಳಗೆ ನಮೂದಿಸಿದ ಮಂಗಡ ಠೇವಣಿಯನ್ನು ಗುತ್ತಿಗೆ ಪತ್ರಗಳೊಂದಿಗೆ ಸಲ್ಲಿಸತಕ್ಕದು. ಗುತ್ತಿಗೆ ಪತ್ರಗಳಲ್ಲಿ ನಿರ್ದಿಷ್ಟಪಡಿಸಿರುವ ಯಾವುದಾದರೊಂದು ರೂಪದಲ್ಲಿ ಗುತ್ತಿಗೆ ಅರ್ಹತಾ ಅವಧಿಗಿಂತ 45 ದಿನಗಳ ಹೆಚ್ಚುವರಿ ಅವಧಿಯನ್ನು (ಒಟ್ಟಾರೆ 135 ದಿನಗಳ ಅವಧಿ) ಅರ್ಹತಾ ಅವಧಿಯಾಗಿ ಹೊಂದಿರುವ ಹಾಗೂ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿಯಲ್ಲಿ ಇವರ ಹೆಸರಿನಲ್ಲಿ ಪಡೆದ ಮತ್ತು ಬೆಳಗಾವಿಯಲ್ಲಿ ನಗದೀಕರಣವಾಗುವ ಮುಂಗಡ ಠೇವಣಿಯನ್ನು ಸಲ್ಲಿಸಬೇಕು.
4. ಭರ್ತಿ ಮಾಡಿದ ಗುತ್ತಿಗೆ ಪತ್ರಗಳನ್ನು ದಿನಾಂಕ: 28.7.09ರ ಮಧ್ಯಾಹ್ನ 16.00 ಘಂಟೆಯೊಳಗಾಗಿ (ಕಛೇರಿ ಕಾರ್ಯಾವಧಿಯಲ್ಲಿ) ಮುಖ್ಯ ಇಂಜಿನೀಯರರು, ಸಣ್ಣ ನೀರಾವರಿ (ಉ)ವಲಯ ಬಿಜಾಪೂರ, ಅಧೀಕ್ಷಕ ಇಂಜಿನೀಯರ್ ಸಣ್ಣ ನೀರಾವರಿ ವೃತ್ತ, ಬೆಳಗಾವಿ ಹಾಗೂ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಾರ್ಯಾಲಯದಲ್ಲಿ ಸ್ವೀಕರಿಸಲಾಗುವುದು. ಮತ್ತು ಸಾಧ್ಯವಾದಲ್ಲಿ ಅಂದೇ 16.00 ಘಂಟೆಗೆ ಆಸಕ್ತರಿರುವ ಗುತ್ತಿಗೆದಾರರ ಸಮ್ಮುಖದಲ್ಲಿ ಮೊದಲನೆಯ ಲಕೋಟೆಯನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಾರ್ಯಾಲಯದಲ್ಲಿ ತೆರೆಯಲಾಗುವುದು. ನಮೂದಿಸಿದ ದಿನಾಂಕಗಳು ಸಾರ್ವತ್ರಿಕ ರಜಾ ಅಥವಾ ಘೋಷಿತ ರಜಾ ದಿನವಾದಲ್ಲಿ ಟೆಂಡರ್ ಸ್ವೀಕರಿಸುವ ಹಾಗೂ ತೆರೆಯುವ ದಿನವು ಮುಂದಿನ ಕಛೇರಿ ಕಾರ್ಯನಿರ್ವಹಿಸುವ ದಿನದಂದು ಮೊದಲಿನ ನಿಗದಿತ ವೇಳೆಯಲ್ಲಿ ಸ್ವೀಕರಿಸಲಾಗುವುದು ಹಾಗೂ ಮೊದಲಿನ ನಿಗದಿತ ಸ್ಥಳದಲ್ಲಿ ತೆರೆಯಲಾಗುವುದು.
5. ಪೂರ್ವ ಟೆಂಡರ್ ಸಭೆಯನ್ನು ದಿನಾಂಕ:24.07.09 ರಂದು 11.00 ಗಂಟೆಗೆ ಈ ಕಛೇರಿಯಲ್ಲಿ (ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ) ಕರೆಯಲಾಗಿದ್ದು ಗುತ್ತಿಗೆದಾರರ ವಿಚಾರಣೆಗಳಿಗೆ ಹಾಗೂ

ವಿವಾದಾಂಶಗಳಿಗೆ ವಿವರಣೆಯನ್ನು ನೀಡಲಾಗುವುದು. (ಟೆಂಡರ್ ಪತ್ರಿಕೆಗಳ "ಗುತ್ತಿಗೆದಾರರಿಗೆ ಸೂಚನೆಗಳು" ಕಲಂ ಸಂ.8.2ರಂತೆ)

6. ಇನ್ನುಳಿದ ವಿವರಗಳನ್ನು ಹಾಗೂ ನಿಯಮಗಳನ್ನು ಮಾದರಿ ಗುತ್ತಿಗೆ ದಾಖಲೆ (ಕೆಡಬ್ಲ್ಯೂ–4)ದಲ್ಲಿ ವಿವರಿಸಲಾಗಿದ್ದು ಗುತ್ತಿಗೆದಾರರು ನಿಯಮಾವಳಿಗಳನ್ನು ಸಂಪೂರ್ಣ ಅಭ್ಯಸಿಸಿ ಅರ್ಥೈಸಿಕೊಳ್ಳಲು ಸೂಚಿಸಲಾಗಿದೆ.

| ಕ್ರಮ ಸಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು ಮೊತ್ತ (ರೂ.ಗಳಲ್ಲಿ ) | ಟೆಂಡರ ಫಾರಂ ಬೆಲೆ ರೂ.+ತೆರಿಗೆ ಪ್ರತ್ಯೇಕ ಹಿಂದಿರುಗಿಸಲಾಗದು | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|
| 1. | ಬೆಳಗಾವಿ ಜಿಲ್ಲೆ ಬೆಳಗಾವಿ ತಾಲೂಕಿನ ಅತ್ತವಾಡ ಗ್ರಾಮದ ಹತ್ತಿರ ಸ.ನೀ. ಕೆರೆ ನಿರ್ಮಾಣ | 136.10 | 204500/– | 14000+ Tax | 18 ತಿಂಗಳು (ಮಳೆಗಾಲ ಸೇರಿ) |

**ಎಸ್.ಎಮ್. ಮನಗೂಳಿ**

ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

**WATER RESOURCES DEPARTMENT (MINOR IRRIGATION)**

**Office of the Executive Engineer, M.I. Division, Belgaum**

**INVITATION FOR TENDERS (IFT)**

**(As per Standard Tender Document KW-4)**

**IFT No.EE /MID/BGM/TND/AE /09-10/1904, Date: 2nd June 2009**

1. The Executive Engineer, M.I.Division, Belgaum. invites tenders from eligible tenderers, for the construction of works detailed in the Table below. The tenderers may submit tenders for any or all of the works given in the Table. Two Cover Tender procedure as per Rule 28 of the KTPP Act shall be followed. The Tenders are required to submit two separate sealed covers, one containing the Earnest money deposit and the details of their capability to undertake the tender (as detailed in IFT Clause 3 and 6), which will be opened first and the second cover containing the price tender which will be opened only if the Tenderer is found to be qualified to execute the tendered work. The Tenderers are advised to note the minimum qualification criteria specified in Clause 3 of the Instructions to Tenderers to qualify for award of the contract.

2. Tender documents may be purchased from the office of Executive Engineer from **20.07.2009 to 23.07.2009** for a non-refundable fee (for two sets) as indicated in the Table below, in the form of cash or Demand Draft/Pay Order on any Nationalized/ Scheduled bank payable at Belgaum in favour of Executive Engineer, M.I.Division, Belgaum. Interested tenderers may obtain further information at the same address. Tender documents requested by mail will be dispatched by registered/speed post on payment of an extra amount of Rs.200/-. The Executive Engineer, M.I.Division, Belgaum will not be held responsible for the postal delay if any, in the delivery of the documents or non-receipt of the same.

3. Tenders must be accompanied by earnest money deposit specified for the work in the Table below. Earnest money deposit will have to be in any one of the forms as specified in the Tender document and shall have to be valid for 45 days beyond the validity of the tender.(Total 135 days Validity from the date of opening of Tender)

4. Tenders must be delivered at the office of the Chief Engineer, M.I.(N) Zone, Bijapur or office of the Superintending Engineer, M.I.Circle, Belgaum or office of the Executive Engineer, M.I.Division, Belgaum. On or before 16.00 hours on **28.7.09**. The First Cover Tenders will be opened on the ~~same day~~/

next day at 16.00 hours, in the presence of the Tenderers who wish to attend. If the office happens to be closed on the date of receipt of the tenders as specified, the tenders will be received and opened on the next working day at the same time and venue.

5. A Pre-tender meeting will be held on **24.7.09** at 11.00 hours at the office of the Executive Engineer, M.I. Division, Belgaum to clarify the issues if any, and to answer questions on any matter that may be raised at that stage as stated in Clause 8.2 of 'Instructions to Tenderers' of the tender document.

6. Other details can be seen in the Standard Tender Documents (KW-4) .

**TABLE**

| Package No. | Name of work | Approximate value of work (Rs. In lakhs) | Earnest Money Deposit (Rs.) | Cost of document (Rs.) | Period of completion |
|---|---|---|---|---|---|
| 1. | Construction of M.I.Tank Near Attawad Village in Tq. & Dist. Belgaum. | 136.10 | 204500/- | 14000+ Tax | 18 months (including monsoon) |

**N.M. MANAGOLI**

P.R. 512 Executive Engineer, M.I.Division, Belgaum.

[ನಮೂನೆ–1]

**9ನೇ ನಿಯಮ ನೋಡಿ**

**ಪೌರಾಡಳಿತ ಇಲಾಖೆ ಪುರಸಭೆ ಕಾರ್ಯಾಲಯ ರಾಮದುರ್ಗ**

**ಅಧಿಸೂಚನೆ**

ಪೌರಾಡಳಿತ ಇಲಾಖೆ, ಪುರಸಭೆ ಕಾರ್ಯಾಲಯ, ರಾಮದುರ್ಗ ಇಲ್ಲಿ ದ್ವಿತೀಯ ದರ್ಜೆ ಸಹಾಯಕಿ ಆಗಿ ಕೆಲಸ ಮಾಡುತ್ತಿರುವ **ಶ್ರೀಮತಿ ಮಹಾದೇವಕ್ಕ ಶಂಕ್ರೆಪ್ಪ** ರಿತ್ತಿ ಇವರ ಹೆಸರನ್ನು **ಶ್ರೀಮತಿ ಮಹಾದೇವಿ ರಮೇಶ ಗೌರೋಜಿ** ಎಂದು ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

ಪಿ.ಡಿ. 104 ಮುಖ್ಯಾಧಿಕಾರಿಗಳು, ಪುರಸಭೆ, ರಾಮದುರ್ಗ

**FORM - IV**

**(See Rule 12)**

**NOTICE**

It is hereby notified that the undersigned has changed his name from **GANGADHAR GADIGEPPA HADAPAD** to **GANGADHAR GADIGEPPA HAMPANNAVAR**

P.D. 105 **GANGADHAR GADIGEPPA HADAPAD**

**FORM - IV**

**(See Rule 12)**

**NOTICE**

It is hereby notified that the undersigned has changed his/her name from **JAYA N. CHALAVADI** to Smt **JAYA W/o RAMANNA NAGANNAVAR**

P.D. 106 **JAYA N. CHALAVADI**